KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೧೫, ೨೦೦೯ (ಪುಷ್ಯ ೨೫, ಶಕ ವರ್ಷ ೧೯೩೦) | ಸಂಚಿಕೆ ೩ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇ.ಪ.(1)1229/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2008**

2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಸಂಬಂಧಿಸಿದಂತೆ ದುರಾಚಾರ ಪ್ರಕರಣದಿಂದ ತಡೆಹಿಡಿಯಲಾಗಿದ್ದು ಸದರಿ ಅಭ್ಯರ್ಥಿಗಳು ಆರೋಪದಿಂದ ಮುಕ್ತರಾಗಿರುವ ಅಭ್ಯರ್ಥಿಗಳ ಫಲಿತಾಂಶವನ್ನು ಈಗಾಗಲೇ ಅಧಿಸೂಚನೆ ಸಂಖ್ಯೆ.ಇಪ(1)1920/2007–08/ಪಿಎಸ್‌ಸಿ, ದಿನಾಂಕ:11.01.2008 ರ ಪ್ರಕಟಿಸಲಾಗಿರುವ ಫಲಿತಾಂಶ ಮುದ್ರಿತವಾಗಿರುವ ಕರ್ನಾಟಕ ರಾಜ್ಯಪತ್ರ ದಿನಾಂಕ:31.01.2008ರಲ್ಲಿ ಸೇರಿಸಿ ಓದಿಕೊಳ್ಳುವುದು.

**"ಪರಿಶಿಷ್ಟ" – 'ಎ'**

**ಗುಲ್ಬರ್ಗಾ ಕೇಂದ್ರ**

| ಕ್ರ. ಸಂ. | ವಿಷಯ | ನೋಂದಣಿ ಸಂಖ್ಯೆ | ತೇರ್ಗಡೆಯಾದ ದರ್ಜೆ |
|---|---|---|---|
| 1. | ಅಕೌಂಟ್ಸ್ ಹೈಯರ್<br>ಜನರಲ್ ಲಾ ಭಾಗ–1<br>ಜನರಲ್ ಲಾ ಭಾಗ–2 | 69766 | ಸಾಮಾನ್ಯ<br>ಸಾಮಾನ್ಯ<br>ಪ್ರಥಮ |
| 2. | ಜನರಲ್ ಲಾ ಭಾಗ–1<br>ಜನರಲ್ ಲಾ ಭಾಗ–2 | 69867 | ಸಾಮಾನ್ಯ<br>ಪ್ರಥಮ |
| 3. | ಜನರಲ್ ಲಾ ಭಾಗ–1<br>ಜನರಲ್ ಲಾ ಭಾಗ–2 | 69866 | ಸಾಮಾನ್ಯ<br>ಪ್ರಥಮ |

**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 639

## ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕುಂದಾಪುರ

## ಟೆಂಡರ್ – ಕಂ – ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಸಕೃನಿ/ಕುಂ/ವಾಹನ ವಿಲೇ/1/2008-09, ದಿನಾಂಕ: 18ನೇ ನವೆಂಬರ್ 2008**

ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ ಕಛೇರಿಯ ಈ ಕೆಳಕಂಡ ಅನುಪಯುಕ್ತ ವಾಹನವನ್ನು ಟೆಂಡರ್–ಕಂ–ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ದಿನಾಂಕ: 03.10.2008 ರಂದು ಗಂಟೆಗೆ ಜರುಗಿದ ಜಿಲ್ಲಾ ಮಟ್ಟದ ವಾಹನ ವಿಲೇವಾರಿ ಸಮಿತಿ ಸಭೆಯಲ್ಲಿ ನಿರ್ಧರಿಸಿದಂತೆ ದಿನಾಂಕ: 21.01.2009 ರಂದು ಬೆಳಿಗ್ಗೆ 11.00 ಗಂಟೆಗೆ ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ ಕಛೇರಿಯ ಆವರಣದಲ್ಲಿ ವಾಹನವು ಎಲ್ಲಿದೆಯೋ, ಹೇಗಿದೆಯೋ ಅಲ್ಲಿ ಹಾಗೆಯೇ ಈ ಕೆಳ ಸಹಿದಾರರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಿಂದ ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಭಾಗವಹಿಸಲು ಕೋರಿದೆ.

**ವಾಹನದ ವಿವರಗಳು:**

| | | | |
|---|---|---|---|
| 1. | ವಾಹನದ ನೊಂದಣಿ ಸಂಖ್ಯೆ | : | ಸಿ ಕೆಜಿ – 593 |
| 2. | ವಾಹನದ ಮಾದರಿ | : | ಮಹೀಂದ್ರ ಜೀಪು |
| 3. | ವಾಹನದ ತಯಾರಿಕಾ ವರ್ಷ | : | 1986 |
| 4. | ಇಂಜೀನ್ ಸಂಖ್ಯೆ | : | D131203 |

## ಟೆಂಡರ್ – ಕಂ – ಬಹಿರಂಗ ಹರಾಜು ಷರತ್ತುಗಳು

1. ಟೆಂಡರ್‌ನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬೇಕು. ನಮೂನೆ ಶುಲ್ಕ ರೂ. 25=00 (ರೂ. ಇಪ್ಪತ್ತೈದು) ಮಾತ್ರವನ್ನು ನಗದಾಗಿ ಪಾವತಿಸಿ ಕಚೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಟೆಂಡರ್ ನಮೂನೆಯನ್ನು ದಿನಾಂಕ20.01.2009 ರ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಮೊಹರು ಮಾಡಿದ ಟೆಂಡರ್ ಲಕೋಟೆಯ ಮೇಲೆ ವಾಹನದ ನೊಂದಣಿ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಟೆಂಡರ್ – ಕಂ – ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಠೇವಣಿ ಹಣ (E M D) ರೂ. 4000–00 ವನ್ನು ಟೆಂಡರ್‌ನೊಂದಿಗೆ ಡಿ.ಡಿ. ಮೂಲಕ ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ, ಇವರ ಹೆಸರಿಗೆ ತೆಗೆದು ಕಛೇರಿಗೆ ಪಾವತಿಸಿ ಪಡೆದ ಮೂಲ ರಶೀದಿಯನ್ನು ಟೆಂಡರ್‌ನೊಂದಿಗೆ ಲಗತ್ತಿಸುವುದು/ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಮೊದಲು ಪಾವತಿಸಿ ರಶೀದಿ ಪಡೆಯುವುದು.
3. ಯಶಸ್ವಿ ಬಿಡ್ಡುದಾರರ ಠೇವಣಿ ಹಣವನ್ನು ಅಂತಿಮ ಬಿಡ್ಡಿನ ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದು. ಉಳಿದ ಬಿಡ್ಡುದಾರರ ಠೇವಣಿ ಹಣವನ್ನು ಹರಾಜು ಪ್ರಕ್ರಿಯೆ ಮುಗಿದ ನಂತರ ಹಿಂದಿರುಗಿಸಲಾಗುವುದು.
4. ಟೆಂಡರ್–ಕಂ–ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಅರ್ಜಿ ಸಲ್ಲಿಸಿದವರು ಮಾತ್ರ ಖುದ್ದಾಗಿ ಪ್ರಕ್ರಿಯೆಯಲ್ಲಿ ಭಾಗವಹಿಸುವುದು. ಅವರ ಪರವಾಗಿ ಬೇರೆಯವರು ಭಾಗವಹಿಸಲು ಅವಕಾಶವಿರುವುದಿಲ್ಲ.
5. ಬಹಿರಂಗ ಹರಾಜನ್ನು ದಿನಾಂಕ:21.01.2009ರ ಬೆಳಿಗ್ಗೆ 11.00 ಗಂಟೆಗೆ ನಡೆಸಲಾಗುವುದು. ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ತೆರೆಯಲಾಗುವುದು. ಬಹಿರಂಗ ಹರಾಜು ಮತ್ತು ಟೆಂಡರ್ ಎರಡರಲ್ಲಿ ಯಾವುದು ಹೆಚ್ಚಿನ ಮೊತ್ತವಿದೆಯೋ ಆ ಮೊತ್ತವನ್ನು ಯಶಸ್ವಿ ಬಿಡ್ಡಿನ ಮೊತ್ತವೆಂದು ಪರಿಗಣಿಸಲಾಗುವುದು.
6. ಯಶಸ್ವಿ ಬಿಡ್ಡುದಾರರು ಬಿಡ್ಡಿನ ಮೊತ್ತದ ಅರ್ಧಭಾಗವನ್ನು (ಠೇವಣಿ ಹಣ ಸೇರಿ) ಹರಾಜಿನ ದಿನವೇ ಸ್ಥಳದಲ್ಲೇ ಮುಂಗಡ ಮೊತ್ತವಾಗಿ ಪಾವತಿಸಬೇಕು. ತಪ್ಪಿದ್ದಲ್ಲಿ ಠೇವಣಿ ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಎರಡನೇ ಹೆಚ್ಚಿನ ಬಿಡ್ಡುದಾರರನ್ನು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
7. ಟೆಂಡರ್ – ಕಂ – ಬಹಿರಂಗ ಹರಾಜಿಗೆ ನಿಗದಿಪಡಿಸಿರುವ ದಿನಾಂಕ ಅನಿರೀಕ್ಷತವಾಗಿ ಸರ್ಕಾರಿ ರಜಾ ದಿನವಾದಲ್ಲಿ ಮರು ಕೆಲಸದ ದಿನ ಹರಾಜು ನಡೆಸಲಾಗುವುದು.
8. ಟೆಂಡರ್ – ಕಂ – ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಚುನಾವಣಾ ಗುರುತಿನ ಚೀಟಿ, ಪಡಿತರ ಚೀಟಿ ಅಥವಾ ಡ್ರೈವಿಂಗ್ ಲೈಸನ್ಸ್ ಇವುಗಳಲ್ಲಿ ಯಾವುದಾದರೂ ಒಂದರ ನಕಲು ಪ್ರತಿಯನ್ನು ಕಡ್ಡಾಯವಾಗಿ ಸಲ್ಲಿಸುವುದು.

9. ಟೆಂಡರ್ – ಕಂ – ಬಹಿರಂಗ ಹರಾಜಿನ ಸವಾಲನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕೆಳ ಸಹಿದಾರರು ಹೊಂದಿರುತ್ತಾರೆ.
10. ಟೆಂಡರ್ – ಕಂ – ಬಹಿರಂಗ ಹರಾಜು ಪ್ರಕ್ರಿಯೆಯನ್ನು ಮಾನ್ಯ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ, ಇವರು ಸ್ಥಿರೀಕರಿಸಿ ವಾಹನವನ್ನು ಹಸ್ತಾಂತರಿಸಲು ಅನುಮತಿ ನೀಡಿದ ನಂತರ ಯಶಸ್ವಿ ಬಿಡ್ಡುದಾರರಿಗೆ ಪೂರ್ತಿ ಬಿಡ್ಡಿನ ಮೊತ್ತವನ್ನು ಹಾಗೂ ತೆರಿಗೆ ಮೊತ್ತವನ್ನು ಪಾವತಿಸಿದ ನಂತರ ಹಸ್ತಾಂತರಿಸಲಾಗುವುದು.
11. ಯಶಸ್ವಿ ಬಿಡ್ಡುದಾರರು ವಾಹನಗಳ ಹಸ್ತಾಂತರಣಕ್ಕೆ ಈ ಕಾರ್ಯಾಲಯದಿಂದ ನೀಡಲ್ಪಡುವ ಸೂಚನಾ ಪತ್ರ ತಲುಪಿದ 10 ದಿನಗಳ ಒಳಗಾಗಿ ಬಿಡ್ಡಿನ ಪೂರ್ತಿ ಮೊಬಲಗು (ತೆರಿಗೆ ಸೇರಿ) ಈ ಕಛೇರಿಗೆ ಪಾವತಿಸಬೇಕು. ತಪ್ಪಿದಲ್ಲಿ ಠೇವಣಿ ಹಾಗೂ ಮುಂಗಡವಾಗಿ ಪಾವತಿಸಿದ ಬಿಡ್ಡಿನ ಶೇಕಡ 50ರ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
12. ಯಶಸ್ವಿ ಬಿಡ್ಡುದಾರರು ಅಂತಿಮವಾಗಿ ವಾಹನವನ್ನು ಪಡೆದುಕೊಳ್ಳುವ ಮೊದಲು ಸದರಿ ವಾಹನಗಳನ್ನು ರಸ್ತೆಯ ಮೇಲೆ ಚಾಲನೆ ಮಾಡದಿರುವ ಬಗ್ಗೆ ರೂ. 20=00 (ರೂ. ಇಪ್ಪತ್ತು) ರ ಛಾಪಾಕಾಗದದಲ್ಲಿ ಮುಚ್ಚಳಿಕೆ ಪತ್ರ ಈ ಕಾರ್ಯಾಲಯಕ್ಕೆ ನೀಡುವುದು.
13. ಯಶಸ್ವಿ ಬಿಡ್ಡುದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ಸಾಗಾಣಿಕೆ ವ್ಯವಸ್ಥೆ ತಾವೇ ಮಾಡತಕ್ಕದ್ದು. ಮತ್ತು ವಾಹನಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನು ಈ ಕಛೇರಿಯಿಂದ ನೀಡಲಾಗುವುದಿಲ್ಲ.
14. ವಾಹನವನ್ನು ಕಾರ್ಯಾಲಯದ ಆವರಣದಲ್ಲಿ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದಾಗಿದೆ.
15. ಹೆಚ್ಚಿನ ವಿವರಗಳನ್ನು ಈ ಕಾರ್ಯಾಲಯದಿಂದ ಪಡೆಯಬಹುದಾಗಿರುತ್ತದೆ.

ಸಹಾಯಕ ಕೃಷಿ ನಿರ್ದೇಶಕರು,
ಕುಂದಾಪುರ

ಪಿ.ಆರ್. 658

## ಕರ್ನಾಟಕ ಲೋಕಸೇವಾ ಆಯೋಗ

### ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು

### ತಿದ್ದುಪಡಿ

**ಸಂಖ್ಯೆ: ಇ.ಪ.(2)1082/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2008**

ಆಯೋಗದ ಅಧಿಸೂಚನೆ ಸಂಖ್ಯೆ.ಇಪ(1)1920/2007–08/ಪಿಎಸ್‌ಸಿ ದಿನಾಂಕ:11.01.2008ರಲ್ಲಿ ಪ್ರಕಟಗೊಂಡಿರುವ 2007ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶಗಳಲ್ಲಿ "ಚಿಕ್ಕಮಗಳೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್–'ಎ' ನಂತರ ಅಪೆಂಡಿಕ್ಸ್–'ಸಿ'ಗೆ ಮೊದಲು ಅಪೆಂಡಿಕ್ಸ್–'ಬಿ'ನಲ್ಲಿ ಪರಿಗಣಿಸಿ ನೋಂದಣಿ ಸಂಖ್ಯೆ. 64443ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**"Appendix-'B'**

**COMMERCIAL TAXES (HIGHER) PART-I**

**B.Com Graduate Passed in Paper-1 & 2 - Reg.No. 64443.**

**ಹೆಚ್.ಬಿ. ಚನ್ನರಾಜು**
ಕಾರ್ಯದರ್ಶಿ (ಪ್ರ),
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 676

## ಕರ್ನಾಟಕ ಲೋಕಸೇವಾ ಆಯೋಗ

### ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು

### ತಿದ್ದುಪಡಿ

**ಸಂಖ್ಯೆ: ಇ.ಪ.(2)1090/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2008**

ಆಯೋಗದ ಅಧಿಸೂಚನೆ ಸಂಖ್ಯೆ.ಇಪ(1)1328/2007–08/ಪಿಎಸ್‌ಸಿ, ದಿನಾಂಕ:26.07.2007 ರಂದು 2007ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶಗಳನ್ನು ದಿನಾಂಕ: 02.08.2007ರ ಕರ್ನಾಟಕ ರಾಜ್ಯಪತ್ರದಲ್ಲಿ

ಪ್ರಕಟಿಸಿದ್ದು, "ಬೆಂಗಳೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಬಿ' ರಡಿಯಲ್ಲಿ ಜನರಲ್ ಲಾ ಭಾಗ–1ರ ಪತ್ರಿಕೆ–2ರಲ್ಲಿ ತೇರ್ಗಡೆಯಾದ ವಿಷಯದ ಶೀರ್ಷಿಕೆಯಡಿ ಉತ್ತೀರ್ಣರಾಗಿರುವ ನೋಂದಣಿ ಸಂಖ್ಯೆ.12189ರ ನಂತರ ನೋಂದಣಿ ಸಂಖ್ಯೆ.12629ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 677

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇ.ಪ.(2)1124/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಆಯೋಗದ ಅಧಿಸೂಚನೆ ಸಂಖ್ಯೆ.ಇಪ(1)1186/2008–09/ಪಿಎಸ್‌ಸಿ ದಿನಾಂಕ:28.10.2008 ರಂದು 2008 ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶ ಪ್ರಕಟಿಸಿದ್ದು, ಅದರಲ್ಲಿ ಬೆಂಗಳೂರು ಪರೀಕ್ಷಾ ಕೇಂದ್ರಕ್ಕೆ ಸಂಬಂಧಿಸಿದಂತೆ ಈ ಕೆಳಗಿನಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

**"ಅಪೆಂಡಿಕ್ಸ್– 'ಎ' ಬೆಂಗಳೂರು ಕೇಂದ್ರ**

| ವಿಷಯ | ನೋಂದಣಿ ಸಂಖ್ಯೆ | ದರ್ಜೆ |
|---|---|---|
| ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–1 | 18237 | ಸಾಮಾನ್ಯ |
| ಎಸ್.ಎ.ಎಸ್. ಭಾಗ–1 | 17440 | ಸಾಮಾನ್ಯ |
| ಎಸ್.ಎ.ಎಸ್. ಭಾಗ–1 | 17623 | ಸಾಮಾನ್ಯ |
| ಇನ್ಷೂರೆನ್ಸ್ ಹೈಯರ್ | 17166 | ಸಾಮಾನ್ಯ |
| ಇನ್ಷೂರೆನ್ಸ್ ಹೈಯರ್ | 17167 | ಸಾಮಾನ್ಯ |
| ಟ್ರೆಜರಿ ಅಕೌಂಟ್ಸ್ ಭಾಗ–1 | 17774 | ಸಾಮಾನ್ಯ |
| ಟ್ರೆಜರಿ ಅಕೌಂಟ್ಸ್ ಭಾಗ–1 | 17787 | ಸಾಮಾನ್ಯ |
| ಟ್ರೆಜರಿ ಅಕೌಂಟ್ಸ್ ಭಾಗ–2 | 13171 | ಸಾಮಾನ್ಯ |

**ಅಪೆಂಡಿಕ್ಸ್ 'ಬಿ'**

**ಬೆಂಗಳೂರು ಕೇಂದ್ರ**

| |
|---|
| ಎಸ್ ಎ ಎಸ್ ಭಾಗ–3ರ ಪತ್ರಿಕೆ–2 ರಿಂದ 5ರವರೆಗೆ ತೇರ್ಗಡೆ ಹೊಂದಿರುವ ನೋಂದಣಿ ಸಂಖ್ಯೆಗಳು |
| 13144, |
| 17335, |
| 17344, |
| 17436 |
| 17569 |

**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 678

**ಆಯುಕ್ತರವರ ಕಛೇರಿ, ಮೈಸೂರು ಮಹಾನಗರ ಪಾಲಿಕೆ ಮೈಸೂರು**

**ಟೆಂಡರ್ ಅಧಿಸೂಚನೆ ಸಂಖ್ಯೆ:1500:08–09, ದಿನಾಂಕ: 22ನೇ ಡಿಸೆಂಬರ್ 2008 (ದ್ವಿ–ಲಕೋಟೆ ಪದ್ಧತಿ)**

ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ ಮೈಸೂರು ರವರಿಂದ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅಥವಾ ಬೇರೆ ರಾಜ್ಯದಲ್ಲಿ ನೊಂದಾಯಿತ ಮತ್ತು ನೀರು

ಸರಬರಾಜು ಮಂಡಳಿ ಸಮುಚಿತ ಗುತ್ತಿಗೆದಾರರಿಂದ "ಐಟಂವಾರು" ಟೆಂಡರುಗಳನ್ನು "ದ್ವಿ ಲಕೋಟೆ" ಪದ್ಧತಿಯಲ್ಲಿ ಕರೆಯಲಾಗಿದೆ. ಪ್ರತ್ಯೇಕವಾಗಿ ಮೊಹರಾದ ಟೆಕ್ನಿಕಲ್ ಬಿಡ್ ಮತ್ತು ಫೈನ್ಯಾನ್ಷಿಯಲ್ ಬಿಡ್ ಗಳನ್ನು ನಿಗದಿತ ನಮೂನೆಯ ದ್ವಿ ಪ್ರತಿಗಳಲ್ಲಿ ಇನ್ನೊಂದು ಮೊಹರಾದ ಲಕೋಟೆಯಲ್ಲಿರಿಸಿ ಮೇಲೆ ಕೆಲಸದ ಹೆಸರನ್ನು ನಮೂದಿಸಲಾದ ಟೆಂಡರ್‌ಗಳನ್ನು ಲೋಕೋಪಯೋಗಿ ಇಲಾಖೆಯ ಸಂಹಿತೆ ಕೆ.ಡಬ್ಲ್ಯೂ–4ರಲ್ಲಿನ ಷರತ್ತುಗಳಿಗೆ ಅನುಗುಣವಾಗಿ ಹಾಗೂ ಸರ್ಕಾರಿ ಪ್ರಕಟಣೆ ಪಿ.ಡಬ್ಲ್ಯೂ.ಡಿ–154 ಎಫ್.ಸಿ 11–2000–ಪಾರದರ್ಶಕತೆ ಆಧ್ಯಾದೇಶ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ರೂಲ್ಸ್ 2000 ಅನುಗುಣವಾಗಿ ಕಾಮಗಾರಿಗಳ ಎದುರಿಗೆ ನಮೂದಿಸಿರುವ ದಿನಾಂಕದಂದು 16.00 ಗಂಟೆಯವರೆಗೆ ಸ್ವೀಕರಿಸಲಾಗುತ್ತದೆ.

**ಈ ಕೆಳಕಂಡ ಮಾಹಿತಿಗಳು ಮೊಹರ್ ಪಡಿಸಲಾದ "ಟೆಕ್ನಿಕಲ್ ಬಿಡ್" ನಲ್ಲಿ (ಕವರ್–1) ಹೊಂದಿರಬೇಕು.**

1. ಕಳೆದ ಐದು ಆರ್ಥಿಕ ವರ್ಷದ (2002–03 ರಿಂದ 2007–08) ಮತ್ತು ಈ ಸಾಲಿನ ಅವಧಿಯಲ್ಲಿ ಟೆಂಡರಿಗಿಟ್ಟ ಮೊತ್ತದ (ಕಾಲಂ–3) ಕನಿಷ್ಠ ಶೇಕಡಾ 80ಕ್ಕಿಂತ ಕಡಿಮೆ ಇರದ ಮೊತ್ತದ (ಪ್ರತಿ ವರ್ಷಕ್ಕೆ ಶೇಕಡಾ 10 ರ ಚಕ್ರೀಯದಂತೆ) ಇದೇ ರೀತಿಯ (Similar Work) ಕಾಮಗಾರಿಯನ್ನು ತೃಪ್ತಿಕರವಾಗಿ ನಿಗದಿತ ಸಮಯದಲ್ಲಿ ನಿರ್ವಹಿಸಿ ಪೂರ್ಣಗೊಳಿಸಿರುವ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ನಿಗಧಿತ ನಮೂನೆಯಲ್ಲಿ ಪಡೆದು ದೃಢೀಕರಿಸಿ ಲಗತ್ತಿಸಿರಬೇಕು.
2. ಟೆಂಡರ್‌ದಾರರು ಕಳೆದ 5 ವರ್ಷದ ಸಾಲಿನಲ್ಲಿ ಯಾವುದಾದರೂ ಎರಡು ವರ್ಷದ ಸಾಲಿನಲ್ಲಿ ಕನಿಷ್ಟ ರೂ. 8.00 ಕೋಟಿಗಳ ವಾರ್ಷಿಕ ವಹಿವಾಟು ನಡೆಸಿರಬೇಕು.
3. ನಿಗಧಿಪಡಿಸಿದ ಇ.ಎಂ.ಡಿ. ಮೊತ್ತವನ್ನು ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ ಮೈಸೂರು ರವರ ಹೆಸರಿಗೆ ಒತ್ತೆಯಾಗಿಟ್ಟು ಟೆಕ್ನಿಕಲ್ ಬಿಡ್ಡಿನೊಂದಿಗೆ ಸಲ್ಲಿಸಬೇಕು.
4. ಸದರಿ ಕೆಲಸಕ್ಕೆ ಬೇಕಾಗುವ ಸೂಕ್ತ ಯಂತ್ರೋಪಕರಣಗಳನ್ನು ಉಪಯೋಗಿಸಿ ಕಾಮಗಾರಿಯನ್ನು ಮಾಡಬೇಕು.
5. ಟೆಂಡರು ಸಲ್ಲಿಸುವ ಗುತ್ತಿಗೆದಾರರು ಕಾಮಗಾರಿ ಅಭಿವೃದ್ಧಿಪಡಿಸಲು ಬೇಕಾಗಿರುವಂತಹ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರಬೇಕು ಹಾಗೂ ಇವುಗಳನ್ನು ಸ್ವಂತವಾಗಿ ಹೊಂದಿರುವ ಬಗ್ಗೆ ಸೂಕ್ತ ದೃಢೀಕೃತ ದಾಖಲಾತಿಗಳನ್ನು ಟೆಂಡರಿನೊಂದಿಗೆ ಲಗತಿಸಬೇಕು.
6. ಹಾಲಿ ನಿರ್ವಹಿಸುತ್ತಿರುವ ಹಾಗೂ ನಿರ್ವಹಿಸಿರುವ ಟೆಂಡರ್ ಕಾಮಗಾರಿಗಳ ವಿವರಗಳನ್ನು ಸಂಬಂಧಪಟ್ಟವರಿಂದ ಕಡ್ಡಾಯವಾಗಿ ನಿಗಧಿತ ನಮೂನೆಯಲ್ಲಿಯೇ ದೃಢೀಕರಿಸಿ ಲಗತ್ತಿಸಿರಬೇಕು.
7. ಸಂಬಂಧ ಪಟ್ಟ ಎಲ್ಲಾ ಮೂಲ ದಸ್ತಾವೇಜುಗಳನ್ನು ಟೆಕ್ನಿಕಲ್ ಬಿಡ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
8. ಕಾಮಗಾರಿಯನ್ನು ನಿರ್ವಹಿಸಲು ಆರ್ಥಿಕವಾಗಿ ಸಾಮರ್ಥ್ಯವಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಪಡೆದು ಟೆಕ್ನಿಕಲ್ ಬಿಡ್ ದಾಖಲಾತಿಯೊಂದಿಗೆ ಲಗತ್ತಿಸಬೇಕು.

   **ಟೆಂಡರ್ ಪಡೆಯಲು ಆರ್ಥಿಕ ಸಾಮರ್ಥ್ಯ** (ಎxಎನ್x1.5=ಬಿ) ಅಲ್ಲಿ ಎ=ಕಳೆದ ಐದು ವರ್ಷಗಳಲ್ಲಿ ಯಾವುದಾದರೊಂದು ವರ್ಷದಲ್ಲಿ ನಿರ್ವಹಿಸಲಾದ ಅತಿ ಹೆಚ್ಚಿನ ಮೊತ್ತದ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯನ್ನು ಪರಿಗಣಿಸಿ ಪೂರ್ಣಗೊಳಿಸಲಾದ/ ಪ್ರಗತಿಯಲ್ಲಿರುವ ಕಾಮಗಾರಿ: ಎನ್ = ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗಧಿಗೊಳಿಸಲಾದ ವರ್ಷಗಳ ಸಂಖ್ಯೆ: ಬಿ= ಇಂದಿನಿಂದ ಒಂದು ವರ್ಷದಲ್ಲಿ ಪ್ರಗತಿಯಲ್ಲಿರುವ ಕಾಮಗಾರಿಯನ್ನು ಪೂರ್ಣಗೊಳಿಸಲು ಬೇಕಾದ ಮೌಲ್ಯ ಈ ಸಾಲಿನ ಬೆಲೆ ಮಟ್ಟದಲ್ಲಿ
9. ಸರ್ಕಾರದ ಆದೇಶ ಸಂಖ್ಯೆ ಎಲ್‌ಡಿ: 300 ಎಲ್ ಇ ಟಿ : 2006 ದಿನಾಂಕ 18.01.2007 ರಂತೆ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ 1996 ರ ಅನ್ವಯ ಗುತ್ತಿಗೆದಾರರಿಗೆ ಸಂದಾಯ ಮಾಡಬೇಕಾದ ಮೊತ್ತದ ಶೇಕಡ 1 ರಷ್ಟನ್ನು ಪ್ರತಿ ಬಿಲ್ಲುಗಳಲ್ಲಿ ಕಡ್ಡಾಯವಾಗಿ ಕಡಿತಗೊಳಿಸಲಾಗುವುದು.

**"ಫೈನಾನ್ಷಿಯಲ್ ಬಿಡ್" ನಲ್ಲಿ (ಕವರ್–2) ಈ ಕೆಳಕಂಡ ವಿವರಗಳನ್ನು ಲಗತ್ತಿಸಬೇಕು.**

1. ಷೆಡ್ಯೂಲ್ "ಬಿ" ದ್ವಿಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳೆರಡರಲ್ಲೂ ದರಗಳನ್ನು ನಮೂದಿಸಿ ತಿದ್ದುಪಡಿ ಮಾಡಿದ್ದಲ್ಲಿ ಸಹಿಯೊಂದಿಗೆ ದೃಢೀಕರಿಸಬೇಕು.
2. ಪಿ.ಡಬ್ಲ್ಯೂ.ಜಿ. ನಮೂನೆ ಕೆ.ಡಬ್ಲ್ಯೂ–4 ಇವುಗಳನ್ನು ಹಾಗೂ ಇದರ ಅಡಕಗಳನ್ನು ಪೂರ್ಣ ರೀತಿಯಲ್ಲಿ ಭರ್ತಿಮಾಡಿ ಸಹಿ ಮಾಡಿ ಸಲ್ಲಿಸಬೇಕು.

ಮೊದಲಿಗೆ "**ಟೆಕ್ನಿಕಲ್ ಬಿಡ್**" ಕವರನ್ನು ತೆರೆದು ಪರಿಶೀಲಿಸಲಾಗುವುದು. "**ಟೆಕ್ನಿಕಲ್ ಬಿಡ್**" ತೃಪ್ತಿಕರ ಎಂದು ಕಂಡು ಬಂದಲ್ಲಿ "**ಫೈನ್ಯಾನ್ಷಿಯಲ್ ಬಿಡ್**" ಕವರನ್ನು ತೆರೆದು ಮುಂದಿನ ಕ್ರಮ ಕೈಗೊಳ್ಳಲಾಗುವುದು. ನಿಬಂಧನೆಗಳನ್ವಯ "ಟೆಕ್ನಿಕಲ್‌ಬಿಡ್" ತೃಪ್ತಿಕರವಾಗಿಲ್ಲದ ಪಕ್ಷದಲ್ಲಿ ಸಂಬಂಧಿಸಿದ "ಫೈನಾನ್ಷಿಯಲ್ ಬಿಡ್" ಕವರನ್ನು ತೆರೆಯದೆ ರದ್ದುಪಡಿಸಲಾಗುವುದು.

ಬದಲಿ ವಿನ್ಯಾಸದೊಂದಿಗೆ ಟೆಂಡರ್ ಸಲ್ಲಿಸುವ ಗುತ್ತಿಗೆದಾರರು ವಿವರವಾದ ವಿನ್ಯಾಸಗಳು, ನಕ್ಷೆಗಳು ಮತ್ತು ಐಟಂವಾರು ದರಗಳನ್ನು ಪ್ರತ್ಯೇಕವಾಗಿ ಸೂಚಿಸಬೇಕು.

ಟೆಂಡರ್ ದಾಖಲಾತಿಗಳನ್ನು ಪಡೆಯಲು ಗುತ್ತಿಗೆದಾರರಿಂದ ಅರ್ಜಿಯನ್ನು ನಿಗದಿಪಡಿಸಿದ ಶುಲ್ಕದೊಡನೆ (ಹಿಂದಿರುಗಿಸಲಾಗುವುದಿಲ್ಲ) ಕೆಳಗೆ ನಮೂದಿಸಿರುವ ದಿನಾಂಕದವರೆವಿಗೂ ಸ್ವೀಕರಿಸಲಾಗುತ್ತದೆ.

ಟೆಂಡರುಗಳನ್ನು ಯಾವ ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕು ಟೆಂಡರ್ ಸ್ವೀಕರಿಸುವ ಅಧಿಕಾರಿಗಳಿಗೆ ಸೇರಿರುತ್ತದೆ. ಹೆಚ್ಚಿನ ವಿವರಗಳೇನಾದರೂ ಬೇಕಿದ್ದಲ್ಲಿ (1) ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ ಮೈಸೂರು. (2) ಅಧೀಕ್ಷಕ ಅಭಿಯಂತರರು, ಮೈಸೂರು ಮಹಾನಗರ ಪಾಲಿಕೆ ಮೈಸೂರು, (3) ಕಾರ್ಯಪಾಲಕ ಅಭಿಯಂತರರು, ವಾ.ವಿ.ನೀ.ಸ ಮತ್ತು ಒಚ ವಿಭಾಗ, ಮೈ.ನ.ಪಾ., ಮೈಸೂರು ಇವರ ಕಛೇರಿಯಲ್ಲಿ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

| | | |
|---|---|---|
| ಖಾಲಿ ಟೆಂಡರ್ ಡಾಕ್ಯೂಮೆಂಟ್ಸ್‌ಗಳನ್ನು ಪಡೆಯಲು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | : | 11.02.2009 ರಂದು ಅಪರಾಹ್ನ 5.30 ರವರೆಗೆ |
| ಖಾಲಿ ಟೆಂಡರ್ ಡಾಕ್ಯೂಮೆಂಟ್ಸ್‌ಗಳನ್ನು ಕೊಡುವ ದಿನಾಂಕ | : | 16.02.2009 ರಂದು ಅಪರಾಹ್ನ 5.30 ರವರೆಗೆ |
| ಪ್ರೀ ಬಿಡ್ ಮೀಟಿಂಗ್ ನಿಗದಿತ ದಿನಾಂಕ | : | 18.02.2009 ರಂದು ಅಪರಾಹ್ನ 3.00 ಗಂಟೆಗೆ |
| ಭರ್ತಿ ಮಾಡಿದ ಟೆಂಡರ್ ಡಾಕ್ಯೂಮೆಂಟ್ಸ್ ಸಲ್ಲಿಸುವ ದಿನಾಂಕ | : | 21.02.2009 ರಂದು ಅಪರಾಹ್ನ 4.00 ಒಳಗೆ |
| ಟೆಕ್ನಿಕಲ್ ಬಿಡ್ ತೆರೆಯುವ ದಿನಾಂಕ | : | 25.02.2009 ರಂದು ಅಪರಾಹ್ನ 3.00 ಗಂಟೆಗೆ |
| ಫೈನಾನ್ಸಿಯಲ್ ಬಿಡ್ ತೆರೆಯುವ ದಿನಾಂಕ | : | 28.02.2009 ರಂದು ಅಪರಾಹ್ನ 3.00 ಗಂಟೆಗೆ |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಕಾಮಗಾರಿಯ ಮೊಬಲಗು (ಲಕ್ಷ ರೂ.ಗಳಲ್ಲಿ) | ಇ.ಎಂ.ಡಿ. (ಲಕ್ಷ ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ. ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1. | ಮೈಸೂರು ನಗರ ಯಾದವಗಿರಿ ವಾಣಿವಿಲಾಸ ನೀರು ಸರಬರಾಜು ಕೇಂದ್ರದ ಆವರಣದಲ್ಲಿ ಹಾಲಿ ಇರುವ ಜುವೆಲ್ ಫಿಲ್ಟರ್ ಬದಲಾಗಿ ಹೊಸದಾಗಿ 25.00 ಎಂ. ಎಲ್.ಡಿ ಸಾಮರ್ಥ್ಯದ ಜಲ ಶುದ್ಧೀಕರಣ ಘಟಕವನ್ನು ನಿರ್ಮಿಸುವ ಕಾಮಗಾರಿ.<br>ಅಥವಾ<br>ಗುತ್ತಿಗೆದಾರರ ಬದಲಿ ವಿನ್ಯಾಸದೊಂದಿಗೆ ಸದರಿ ಆವರಣದಲ್ಲಿ 25.00 ಎಂ.ಎಲ್.ಡಿ. ಸಾಮರ್ಥ್ಯದ ಜಲ ಶುದ್ಧೀಕರಣ ಘಟಕವನ್ನು ನಿರ್ಮಿಸುವ ಕಾಮಗಾರಿ.<br>(ಬದಲಿ ವಿನ್ಯಾಸದೊಂದಿಗೆ ಟೆಂಡರ್ ಸಲ್ಲಿಸುವ ಗುತ್ತಿಗೆದಾರರು, ವಿವರವಾದ ವಿನ್ಯಾಸಗಳು, ನಕ್ಷೆಗಳು ಮತ್ತು ಐಟಂವಾರು ದರಗಳನ್ನು ಪ್ರತ್ಯೇಕವಾಗಿ ಸೂಚಿಸಬೇಕು. | 400.00 | 4.00 | 20,000.00 | 3 ತಿಂಗಳು | 1ನೇ ದರ್ಜೆ |

ಆಯುಕ್ತರು,

ಪಿ.ಡಿ. 3 ಮೈಸೂರು ಮಹಾನಗರ ಪಾಲಿಕೆ, ಮೈಸೂರು.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇ.ಪ.(1)1265/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2008**

ಆಯೋಗದ ಅಧಿಸೂಚನೆ ಸಂಖ್ಯೆ:ಇಪ(1)1186/2008–09/ಪಿಎಸ್‌ಸಿ ದಿನಾಂಕ:28.10.2008ರಂದು 2008ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆ ಫಲಿತಾಂಶವನ್ನು ಪ್ರಕಟಿಸಲಾಗಿದ್ದು, 'ಗುಲ್ಬರ್ಗಾ' ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್–'ಎ' ನಲ್ಲಿ ಅಕೌಂಟ್ಸ್ ಹೈಯರ್ ವಿಷಯದ ಪ್ರಥಮ ದರ್ಜೆಯಡಿಯಲ್ಲಿ ತೇರ್ಗಡೆ ಹೊಂದಿರುವ ನೋಂದಣಿ ಸಂಖ್ಯೆ: 34767ನ್ನು ನೋಂದಣಿ ಸಂಖ್ಯೆ. 34766ರ ನಂತರ ಸೇರಿಸಿ ಓದಿಕೊಳ್ಳುವುದು.

**ಹೆಚ್.ಬಿ. ಚನ್ನರಾಜು**

ಕಾರ್ಯದರ್ಶಿ (ಪ್ರ),

ಪಿ.ಆರ್. 679 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,

ಕರ್ನಾಟಕ ಲೋಕಸೇವಾ ಆಯೋಗ.

## ಕಾರ್ಯಕಾರಿ ಅಭಿಯಂತರವರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ, ಉಡುಪಿ

### ಟೆಂಡರ್ ಪ್ರಕಟಣೆ

**ನಂ./ಜಿ.ಎನ್.ಎಲ್/ಎನ್.ಐ.ಟಿ/ಯು.ಡಿ.ಎನ್/08–09/ಜೆಇ, ದಿನಾಂಕ: 17ನೇ ಡಿಸೆಂಬರ್ 2008**

ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ, ಐಟಂ, ದರದ, ಮೊಹರಾದ ಟೆಂಡರನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಹೆಚ್ಚಿನ ವಿವರಗಳಿಗೆ ಇಲಾಖೆಯ ವೆಬ್‌ಸೈಟ್ "http://www.kpwd.gov.in" ನಲ್ಲಿ ಪಡೆಯಬಹುದು. ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ.), ದಿನಾಂಕ 14.01.09 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 14.01.2009 ರವರೆಗೆ ನೀಡಲಾಗುವುದು. ಭರ್ತಿ ಮಾಡಿದ ಟೆಂಡರುಗಳನ್ನು ದಿನಾಂಕ: 16.01.2009 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ, ಉಡುಪಿ ಇವರು ಸ್ವೀಕರಿಸುವರು. ಸಾಧ್ಯವಾದಲ್ಲಿ ಟೆಂಡರನ್ನು ಅದೇ ದಿನ ತೆರೆಯಲಾಗುವುದು.

**ಲೆಕ್ಕ ಶೀರ್ಷಿಕೆ "3054 – ಮುಖ್ಯ ಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ"**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇ.ಎಂ.ಡಿ. (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ | ಟೆಂಡರ್ ಶೆಡ್ಯೂಲ್ ಬೆಲ್ (ತೆರಿಗೆ ಸೇರಿ) (ರೂ. ಗಳಲ್ಲಿ) | ಅರ್ಹ ಗುತ್ತಿಗೆದಾರರು |
|---|---|---|---|---|---|---|
| 1. | ಉಡುಪಿ ತಾಲ್ಲೂಕು, ಸೀತಾನದಿ – ಬ್ರಹ್ಮಾವರ ರಸ್ತೆಯ ಕಿಮೀ. 20.50 ರಿಂದ 35.00 ರವರೆಗೆ ಗುಂಡಿ ಮುಚ್ಚುವುದು. | 5,97,000.00 | 15,000.00 | 2 ತಿಂಗಳು | 675/– | IIIನೇ ದರ್ಜೆ & ಮೇಲ್ಪಟ್ಟು |
| 2. | ಉಡುಪಿ ತಾಲ್ಲೂಕು, ಕೋಟ – ಗೋಳಿಯಂಗಡಿ ರಸ್ತೆಯ ಕಿಮೀ. 20.00 ರಿಂದ 26.60 ರವರೆಗೆ ಗುಂಡಿ ಮುಚ್ಚುವುದು. | 8,96,000.00 | 22,400.00 | 2 ತಿಂಗಳು | 1050/– | IIIನೇ ದರ್ಜೆ & ಮೇಲ್ಪಟ್ಟು |
| **ಲೆಕ್ಕ ಶೀರ್ಷಿಕೆ "3054 – 12ನೇ ಹಣಕಾಸು ಯೋಜನೆ"** | | | | | | |
| 3. | ಕಾರ್ಕಳ ತಾಲ್ಲೂಕು, ಅಜೆಕಾರು – ಮಿಯಾರು ರಸ್ತೆಯ ಕಿಮೀ. 7.00 ರಿಂದ 15.00 ರವರೆಗೆ ದುರಸ್ತಿ | 6,96,000.00 | 17,400.00 | 2 ತಿಂಗಳು | 800/– | IIIನೇ ದರ್ಜೆ & ಮೇಲ್ಪಟ್ಟು |
| 4. | ಉಡುಪಿ ತಾಲ್ಲೂಕು, ಕೋಟ – ಗೋಳಿಯಂಗಡಿ ರಸ್ತೆಯ ಕಿಮೀ. 14.00 ರಿಂದ 20.00 ರವರೆಗೆ ಗುಂಡಿ ಮುಚ್ಚುವುದು | 6,78,000.00 | 1,695.00 | 2 ತಿಂಗಳು | 775/– | IIIನೇ ದರ್ಜೆ & ಮೇಲ್ಪಟ್ಟು |
| **ಲೆಕ್ಕ ಶೀರ್ಷಿಕೆ "5054–ವಿಶೇಷ ಘಟಕ ಯೋಜನೆ – ಓ.ಆರ್.ಎಫ್" (SCP - ORF):** | | | | | | |
| 5. | ಉಡುಪಿ ತಾಲ್ಲೂಕು, ಬ್ರಹ್ಮಾವರ – ಹರ್ಕಾಡಿ ರಸ್ತೆ ಕಿಮೀ. 0.00 ರಿಂದ 4.00 ರವರೆಗೆ ಅಭಿವೃದ್ಧಿ (ಬ್ರಹ್ಮಾವರ ಜನ್ನಾಡಿ ರಸ್ತೆಯ ಕಿಮೀ. 5.00 ರಿಂದ 9.00 ಮತ್ತು 9.70 ರಿಂದ 10.00ರ ವರೆಗೆ) | 5,81,075.00 | 14,550.00 | 2 ತಿಂಗಳು | 660/– | IIIನೇ ದರ್ಜೆ & ಮೇಲ್ಪಟ್ಟು |
| 6. | ಕುಂದಾಪುರ ತಾಲ್ಲೂಕು, ಚಿತ್ತೂರು – ಹೆಮ್ಮಕ್ಕಿಹಾರ ರಸ್ತೆ ಕಿಮೀ. 0.00 ರಿಂದ 4.00 ರವರೆಗೆ ಅಭಿವೃದ್ಧಿ | 8,94,467.00 | 22,400.00 | 2 ತಿಂಗಳು | 1000/– | IIIನೇ ದರ್ಜೆ & ಮೇಲ್ಪಟ್ಟು |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇ.ಎಂ.ಡಿ. (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ | ಟೆಂಡರ್ ಶೆಡ್ಯೂಲ್ ಬೆಲ್ (ತೆರಿಗೆ ಸೇರಿ) (ರೂ. ಗಳಲ್ಲಿ) | ಅರ್ಹ ಗುತ್ತಿಗೆದಾರರು |
|---|---|---|---|---|---|---|
| **ಲೆಕ್ಕ ಶೀರ್ಷಿಕೆ "5054–ಎಸ್.ಸಿ.ಪಿ – ನಬಾರ್ಡ್ ರಸ್ತೆಗಳು"** | | | | | | |
| 7. | ಕುಂದಾಪುರ ತಾಲ್ಲೂಕು, ಚಕ್ರಮೈದಾನ – ಕಬ್ಬಿನಾಲೆ ರಸ್ತೆ ಆಯ್ದಭಾಗಗಳಲ್ಲಿ ಅಭಿವೃದ್ಧಿ. | 5,93,666.00 | 14,850.00 | 2 ತಿಂಗಳು | 670/– | IIIನೇ ದರ್ಜೆ & ಮೇಲ್ಪಟ್ಟು |
| 8. | ಕುಂದಾಪುರ ತಾಲ್ಲೂಕು, ಅಲ್ಬಾಡಿ ಮೂರೂರು – ಹೆಂಗವಳ್ಳಿ ರಸ್ತೆ ಆಯ್ದಭಾಗಗಳಲ್ಲಿ ಅಭಿವೃದ್ಧಿ. | 5,67,826.00 | 14,200.00 | 2 ತಿಂಗಳು | 650/– | IIIನೇ ದರ್ಜೆ & ಮೇಲ್ಪಟ್ಟು |
| 9. | ಕುಂದಾಪುರ ತಾಲ್ಲೂಕು, ಗಂಗೊಳ್ಳಿ – ತ್ರಾಸಿ ರಸ್ತೆ ಕಿಮೀ. 4.70 ರಿಂದ 5.60 ರತನಕ ಅಭಿವೃದ್ಧಿ. | 17,79,665.00 | 44,500.00 | 3 ತಿಂಗಳು | 200/– | IIನೇ ದರ್ಜೆ & ಮೇಲ್ಪಟ್ಟು |
| **ಲೆಕ್ಕ ಶೀರ್ಷಿಕೆ "5054–ಟಿ.ಎಸ್.ಪಿ – ನಬಾರ್ಡ್ ರಸ್ತೆಗಳು"** | | | | | | |
| 10. | ಕುಂದಾಪುರ ತಾಲ್ಲೂಕು, ಗಂಗೊಳ್ಳಿ – ತ್ರಾಸಿ ರಸ್ತೆ ಕಿಮೀ. 3.50 ರಿಂದ 4.00 ರತನಕ ಅಭಿವೃದ್ಧಿ | 9,65,530.00 | 24,150.00 | 3 ತಿಂಗಳು | 1,100/– | IIIನೇ ದರ್ಜೆ & ಮೇಲ್ಪಟ್ಟು |
| **ಲೆಕ್ಕ ಶೀರ್ಷಿಕೆ "5054–ಎಸ್.ಸಿ.ಪಿ – ಕೇಶಿಫ್"** | | | | | | |
| 11. | ಕುಂದಾಪುರ ತಾಲ್ಲೂಕು ಸಿದ್ದಾಪುರ – ಹಳ್ಳಿಹೊಳೆ – ಜಡ್ಕಲ್ ರಸ್ತೆ ಕಿಮೀ. 0.00 ರಿಂದ 32.40 ರವರೆಗೆ ಆಯ್ದಭಾಗಗಳಲ್ಲಿ ಅಭಿವೃದ್ಧಿ (ಕಿಮೀ. 3.30 ರಿಂದ 4.90 ರತನಕ) | 15,76,130.00 | 39,400.00 | 3 ತಿಂಗಳು | 1,774/– | IIನೇ ದರ್ಜೆ & ಮೇಲ್ಪಟ್ಟು |

**ಸಾಮಾನ್ಯ ನಿಯಮಗಳು:**

1) ಗುತ್ತಿಗೆದಾರರು ಮೇಲಿನ ಸ್ವರೂಪದ ಕಾಮಗಾರಿಗಳಲ್ಲಿ ಅನುಭವವುಳ್ಳವರಾಗಿದ್ದು, ಡಾಂಬರು ಹಾಗೂ ಇನ್ನಿತರ ಸಾಮಾಗ್ರಿಗಳ ಸಂಗ್ರಹಣಕ್ಕೆ ಮತ್ತು ಅಗತ್ಯವಿರುವ ಯಂತ್ರೋಪಕರಣಗಳ ಬಗ್ಗೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು (ಸಾಮಾಗ್ರಿಗಳನ್ನು) ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್ ಗುಣಮಟ್ಟ ಸರಿಹೊಂದುವಂತಿರಬೇಕು.
2) ಇ.ಎಂ.ಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್/ಕಾಲ್‌ಡೆಪೋಸಿಟ್, ಡಿ.ಡಿ., ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ ಯನ್ನು ಕೆಳ ಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗಧಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
3) ಕಾಮಗಾರಿಯನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಶೇ. 1 ರಷ್ಟು "ಕಾರ್ಮಿಕ ಕಲ್ಯಾಣ ಸುಂಕ" ಕಡಿತಗೊಳಿಸಲಾಗುವುದು. ಅಲ್ಲದೆ ಸದ್ರಿ ಕಾಯ್ದೆ / ಆದೇಶಗಳಿಗೆ ಅನುಗುಣವಾಗಿ ಸುಂಕವನ್ನು ಗಣನೆಗೆ ತೆಗೆದುಕೊಂಡು ಟೆಂಡರ್ ದರ ನಮೂದಿಸತಕ್ಕದೆಂದು ತಿಳಿಯಪಡಿಸಲಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರು,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಉಡುಪಿ ವಿಭಾಗ, ಉಡುಪಿ.

ಪಿ.ಆರ್. 4

**ಕರ್ನಾಟಕ ಲೋಕ ಸೇವಾ ಆಯೋಗ**

**'ಉದ್ಯೋಗ ಸೌಧ', ಬೆಂಗಳೂರು – 560 001**

**ಅಧಿಸೂಚನೆ**

**ಸಂಖ್ಯೆ: ಇ(3)2277/2008–09/ಪಿಎಸ್‌ಸಿ ದಿನಾಂಕ: 15ನೇ ಜನವರಿ 2009**

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 16/02/2009**

1. ಕರ್ನಾಟಕ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿನ ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1)ರ 214 ಹಾಗೂ ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–2)ರ 239 ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ಅದರ ತಿದ್ದುಪಡಿಗಳನ್ವಯ ನೇಮಕಾತಿಯನ್ನು ಮಾಡಲು ಅರ್ಹ ಅಭ್ಯರ್ಥಿಗಳಿಂದ ಆಯೋಗವು ನಿಗದಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ. ಈ ನೇಮಕಾತಿಯಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅವರು ಗಳಿಸುವ ಅಂಕಗಳ ಅರ್ಹತಾನುಸಾರ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಪ್ರಕಟಿಸಿದ ಹುದ್ದೆಗಳ ಸಂಖ್ಯೆಯ 1:5ರ ಅನುಪಾತದಂತೆ ಸಂದರ್ಶನಕ್ಕೆ ಕರೆದು, ಈ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಅರ್ಹತೆಯನ್ನು ಆಧರಿಸಿ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನುಸಾರ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗಳಿಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುತ್ತದೆ.
2. ಅರ್ಜಿ ಶುಲ್ಕ ರೂ. 50 ಅನ್ನು ನಗದು ರೂಪದಲ್ಲಿ ಪಾವತಿಸಿ ಆಯೋಗದ ಕೇಂದ್ರ ಕಛೇರಿ ಮತ್ತು ಪ್ರಾಂತೀಯ ಕಛೇರಿಗಳಲ್ಲಿ ಹಾಗೂ ಆಯ್ದ ಅಂಚೆ ಕಛೇರಿಗಳಲ್ಲಿ ಅರ್ಜಿಗಳನ್ನು ಖರೀದಿಸಬಹುದು.
3. **<u>ಪರೀಕ್ಷಾ ಶುಲ್ಕ:</u>**

| | |
|---|---|
| ಪ.ಜಾ, ಪ.ಪಂ ಪ್ರ–1, ಹಾಗೂ ಮಾಜಿ ಸೈನಿಕರು | **ರೂ. 100/–** |
| ಇತರೆ | **ರೂ. 300/–** |

3.1 **<u>ಶುಲ್ಕ ಪಾವತಿ ಮಾಡುವ ವಿಧಾನ:</u>**

ಅಂಚೆ ಕಛೇರಿಗಳಲ್ಲಿ, ಆಯೋಗದ ಕೇಂದ್ರ ಹಾಗೂ ಪ್ರಾಂತೀಯ ಕಛೇರಿಗಳಲ್ಲಿ ಶುಲ್ಕವನ್ನು ನಗದಾಗಿ ಪಾವತಿ ಮಾಡಿ ಅರ್ಜಿಯನ್ನು ಖರೀದಿಸಬಹುದು ಹಾಗೂ ಸಲ್ಲಿಸಬಹುದು.

4. **<u>ಅರ್ಜಿಯ ಮಾರಾಟ ಹಾಗೂ ಸ್ವೀಕೃತಿಯ ಸ್ಥಳಗಳು:</u>**

ಅರ್ಜಿ ಮಾರಾಟದ ಕೊನೆಯ ದಿನಾಂಕ: **12/02/2009.**

ಆಯೋಗದ ಕೇಂದ್ರ ಕಛೇರಿ: **ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001,**

ಆಯೋಗದ ಪ್ರಾಂತೀಯ ಕಛೇರಿಗಳು:

| | | |
|---|---|---|
| **ಸಹಾಯಕ ಕಾರ್ಯದರ್ಶಿ**<br>**ಕರ್ನಾಟಕ ಲೋಕಸೇವಾ ಆಯೋಗ**<br>ಪ್ರಾಂತೀಯ ಕಛೇರಿ,<br>ಸಂಖ್ಯೆ: 899, 3ನೇ ಮೇನ್,<br>8ನೇ ಅಡ್ಡರಸ್ತೆ, ಸರಸ್ವತಿಪುರಂ,<br>ಮೈಸೂರು–570009 | **ಸಹಾಯಕ ಕಾರ್ಯದರ್ಶಿ**<br>**ಕರ್ನಾಟಕ ಲೋಕಸೇವಾ ಆಯೋಗ**<br>ಪ್ರಾಂತೀಯ ಕಛೇರಿ,<br>ಜಿಲ್ಲಾ ಪಂಚಾಯತ್ ಹಳೇ ಕಟ್ಟಡ,<br>ಜಿಲ್ಲಾಧಿಕಾರಿಗಳ ಕಛೇರಿ ಆವರಣ,<br>ಬೆಳಗಾವಿ–590001. | **ಸಹಾಯಕ ಕಾರ್ಯದರ್ಶಿ**<br>**ಕರ್ನಾಟಕ ಲೋಕಸೇವಾ ಆಯೋಗ**<br>**ಪ್ರಾಂತೀಯ ಕಛೇರಿ**<br>ಸಂಖ್ಯೆ:28/ಬಿ, 3ನೇ ಮಹಡಿ, ವಿಕಾಸ ಭವನ, ಮಿನಿ ವಿಧಾನಸೌಧ,<br>ಗುಲ್ಬರ್ಗಾ–585102 |

5. **ಅಂಚೆ ಕಛೇರಿಗಳು:**

| ಕ್ರಮ ಸಂಖ್ಯೆ | ಜಿಲ್ಲೆ | ಕ್ರಮ ಸಂಖ್ಯೆ | ಜಿಲ್ಲೆ |
|---|---|---|---|
| 1 | ಬಾಗಲಕೋಟೆ ಮುಖ್ಯ ಅಂಚೆ ಕಛೇರಿ 587101 | 2 | ಜಮಖಂಡಿ ಮುಖ್ಯ ಅಂಚೆ ಕಛೇರಿ 587301 |
| 3 | ಬೆಳಗಾವಿ ಮುಖ್ಯ ಅಂಚೆ ಕಛೇರಿ 590001 | 4 | ಚಿಕ್ಕೋಡಿ ಮುಖ್ಯ ಅಂಚೆ ಕಛೇರಿ 591201 |
| 5 | ಬಳ್ಳಾರಿ ಮುಖ್ಯ ಅಂಚೆ ಕಛೇರಿ 583101 | 6 | ಹೊಸಪೇಟೆ ಮುಖ್ಯ ಅಂಚೆ ಕಛೇರಿ 583201 |
| 7 | ಬೀದರ್ ಮುಖ್ಯ ಅಂಚೆ ಕಛೇರಿ 585401 | 8 | ಬಿಜಾಪುರ ಮುಖ್ಯ ಅಂಚೆ ಕಛೇರಿ 586101 |

| ಕ್ರಮ ಸಂಖ್ಯೆ | ಜಿಲ್ಲೆ | ಕ್ರಮ ಸಂಖ್ಯೆ | ಜಿಲ್ಲೆ |
|---|---|---|---|
| 9 | ಚಾಮರಾಜನಗರ ಎಸ್ ಒ 571313 | 10 | ಚಿಕ್ಕಮಗಳೂರು ಮುಖ್ಯ ಅಂಚೆ ಕಛೇರಿ 577101 |
| 11 | ಚಿತ್ರದುರ್ಗ ಮುಖ್ಯ ಅಂಚೆ ಕಛೇರಿ 577501 | 12 | ಮಂಗಳೂರು ಮುಖ್ಯ ಅಂಚೆ ಕಛೇರಿ 575001 |
| 13 | ದಾವಣಗೆರೆ ಮುಖ್ಯ ಅಂಚೆ ಕಛೇರಿ 577001 | 14 | ಧಾರವಾಡ ಮುಖ್ಯ ಅಂಚೆ ಕಛೇರಿ 580001 |
| 15 | ಹುಬ್ಬಳ್ಳಿ ಮುಖ್ಯ ಅಂಚೆ ಕಛೇರಿ 580020 | 16 | ಗದಗ ಮುಖ್ಯ ಅಂಚೆ ಕಛೇರಿ 582101 |
| 17 | ಗುಲ್ಬರ್ಗಾ ಮುಖ್ಯ ಅಂಚೆ ಕಛೇರಿ 585101 | 18 | ಯಾದಗಿರಿ ಮುಖ್ಯ ಅಂಚೆ ಕಛೇರಿ 585201 |
| 19 | ಹಾಸನ ಮುಖ್ಯ ಅಂಚೆ ಕಛೇರಿ 573201 | 20 | ಹಾವೇರಿ ಮುಖ್ಯ ಅಂಚೆ ಕಛೇರಿ 581110 |
| 21 | ಮಡಿಕೇರಿ ಮುಖ್ಯ ಅಂಚೆ ಕಛೇರಿ 571201 | 22 | ಕೋಲಾರ ಮುಖ್ಯ ಅಂಚೆ ಕಛೇರಿ 563101 |
| 23 | ರಾಬರ್ಟ್‌ಸನ್ ಪೇಟೆ ಎಸ್ ಒ 563122 | 24 | ಕೊಪ್ಪಳ ಮುಖ್ಯ ಅಂಚೆ ಕಛೇರಿ 583221 |
| 25 | ಮಂಡ್ಯ ಮುಖ್ಯ ಅಂಚೆ ಕಛೇರಿ 571401 | 26 | ಮೈಸೂರು ಮುಖ್ಯ ಅಂಚೆ ಕಛೇರಿ 570001 |
| 27 | ಸರಸ್ವತಿಪುರಂ ಮುಖ್ಯ ಅಂಚೆ ಕಛೇರಿ 570009 | 28 | ರಾಯಚೂರು ಮುಖ್ಯ ಅಂಚೆ ಕಛೇರಿ 584101 |
| 29 | ಶಿವಮೊಗ್ಗ ಮುಖ್ಯ ಅಂಚೆ ಕಛೇರಿ 577201 | 30 | ತುಮಕೂರು ಮುಖ್ಯ ಅಂಚೆ ಕಛೇರಿ 572101 |
| 31 | ಮಧುಗಿರಿ ಮುಖ್ಯ ಅಂಚೆ ಕಛೇರಿ 572132 | 32 | ಉಡುಪಿ ಮುಖ್ಯ ಅಂಚೆ ಕಛೇರಿ 576101 |
| 33 | ಕಾರವಾರ ಮುಖ್ಯ ಅಂಚೆ ಕಛೇರಿ 581301 | 34 | ಸಿರಸಿ ಮುಖ್ಯ ಅಂಚೆ ಕಛೇರಿ 581401 |
| 35 | ರಾಮನಗರ ಎಸ್ ಒ 571511 | 36 | ಚಿಕ್ಕಬಳ್ಳಾಪುರ ಮುಖ್ಯ ಅಂಚೆ ಕಛೇರಿ 562101 |
| 37 | ಬೆಂಗಳೂರು ಜನರಲ್ ಪೋಸ್ಟ್ ಆಫೀಸ್ 560001 | 38 | ಬೆಂಗಳೂರು–ಬಸವನಗುಡಿ ಮುಖ್ಯ ಅಂಚೆ ಕಛೇರಿ 560004 |
| 39 | ಬೆಂಗಳೂರು–ರಾಜಾಜಿನಗರ ಮುಖ್ಯ ಅಂಚೆ ಕಛೇರಿ 560010 | 40 | ಬೆಂಗಳೂರು–ಯಶವಂತಪುರ ಮುಖ್ಯ ಅಂಚೆ ಕಛೇರಿ 560022 |
| 41 | ಬೆಂಗಳೂರು–ಜಯನಗರ ಮುಖ್ಯ ಅಂಚೆ ಕಛೇರಿ 560041 | 42 | ಬೆಂಗಳೂರು–ಕೆಂಗೇರಿ ಎಸ್ ಒ 560060 |
| 43 | ಬೆಂಗಳೂರು–ಕೆ.ಆರ್.ಪುರಂ ಎಸ್ ಒ 560036 | 44 | ಬೆಂಗಳೂರು–ಯಲಹಂಕ ಉಪನಗರ ಎಸ್ ಒ 560064 |

ಅ) ಭರ್ತಿ ಮಾಡಿದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಅಂಚೆ ಮೂಲಕವಾಗಲಿ ಅಥವಾ ಕೊರಿಯರ್ ಮೂಲಕವಾಗಲಿ ಆಯೋಗದ ಕಛೇರಿಗಳಿಗೆ ಕಳುಹಿಸಬಾರದು.

ಆ) ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

ಇ) ಅಭ್ಯರ್ಥಿಗಳು ಪ್ರತಿ ಹುದ್ದೆಗೂ, ಪ್ರತ್ಯೇಕವಾಗಿ ಶುಲ್ಕದೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು.

ಈ) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು

6. **ಶೈಕ್ಷಣಿಕ ವಿದ್ಯಾರ್ಹತೆ:**

**ಅ) ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1)**

ಬ್ಯಾಚುಲರ್ ಪದವಿಯನ್ನು ಹೊಂದಿರಬೇಕು.

**ಆ) ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–2)**

ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಬೇಕು.

**ಸೂಚನೆ: ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.**

7. **ಹುದ್ದೆಗಳ ವರ್ಗೀಕರಣ:**

ಅ) **ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1)–214 ಹುದ್ದೆಗಳು**

ಈ ಹುದ್ದೆಗಳ ವರ್ಗೀಕರಣದ ವಿವರವನ್ನು ಅನುಬಂಧ–1ರಲ್ಲಿ ತೋರಿಸಿದೆ.

ಆ) **ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–2)–239 ಹುದ್ದೆಗಳು**

ಈ ಹುದ್ದೆಗಳ ವರ್ಗೀಕರಣದ ವಿವರವನ್ನು ಅನುಬಂಧ–2ರಲ್ಲಿ ತೋರಿಸಿದೆ.

8. **ವೇತನ ಶ್ರೇಣಿ:**

ಅ) **ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1):**

ರೂ. 7275–175–7800–200–8600–225–9500–250–10500–300–12300–350–13350

ಆ) **ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–2):**

ರೂ. 5800–100–6000–125–6500–150–7100–175–7800–200–8600–225–9500–250–10500

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006ರಂತೆ.

9. **ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು

ಆ) ಗರಿಷ್ಠ ವಯೋಮಿತಿ :

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ,2ಬಿ,3ಎ,3ಬಿ** | **38 ವರ್ಷ** |
| **ಪ.ಜಾ/ಪ.ಪಂ/ಪ್ರ–1** | **40 ವರ್ಷ** |

ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

➢ ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

➢ ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

➢ ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದ್ದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಅಂದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವ ವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

- ➢ ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.
- ➢ ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸಮಾಡುತ್ತಿದ್ದರೆ, ಅಥವಾ ಹಿಂದೆಯಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು
- ➢ ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು
- ➢ ಅಭ್ಯರ್ಥಿಯು ಜೀತಕಾರ್ಮಿಕ ನಾಗಿದ್ದ ಪಕ್ಷದಲ್ಲಿ 10 ವರ್ಷಗಳು

ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

**9. <u>ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:</u>**

ಜಾತಿ ಮೀಸಲಾತಿ ಕೋರಬಯಸುವ

- ➢ ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ
- ➢ ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ
- ➢ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು, ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು/ಚಾಲ್ತಿಯಲ್ಲಿರಬೇಕು. ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.
- ➢ ಸರ್ಕಾರಿ ಆದೇಶ ಸಂಖ್ಯೆ SWD 225 BCA 2000 Dated: 30.03.2002 ರನ್ವಯ ಪ್ರಸ್ತುತ ನಿಯಮಾವಳಿಗಳ ರೀತ್ಯ ಮೀಸಲಾತಿಗೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ಜಾತಿಗಳ ಬಗ್ಗೆ ಮಾಹಿತಿಗಾಗಿ ಸಂಬಂಧಿತ ಅಭ್ಯರ್ಥಿಗಳು ಆಯೋಗದ ವೆಬ್‌ಸೈಟ್‌ನ್ನು ನೋಡಬಹುದಾಗಿದೆ.

**10. ಗ್ರಾಮೀಣ ಅಭ್ಯರ್ಥಿ:**

- ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಾಲ್ಲಿದ್ದು, ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
- ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.
- ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು.
- ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**ಸೂಚನೆ:** ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

**11. ಕನ್ನಡ ಮಾಧ್ಯಮ ಅಭ್ಯರ್ಥಿ :**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

**12.** ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1) ಹಾಗೂ (ಗ್ರೇಡ್–2) ಹುದ್ದೆಯ ಕೆಲಸಕಾರ್ಯಗಳು ಕಾರ್ಯಕಾರಿ ಕೆಲಸಗಳಾಗಿವೆ. **ಅಂಗವಿಕಲರು ಈ ಹುದ್ದೆಯ ಕಾರ್ಯ ಭಾರಗಳನ್ನು ನಿಭಾಯಿಸಲು ಸಾಧ್ಯವಾಗದ ಪ್ರಯುಕ್ತ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 76 ಸೆನೆನಿ 96, ದಿನಾಂಕ 13/05/1997ರಲ್ಲಿ ಈ ಹುದ್ದೆಗಳಿಗೆ ಅಂಗವಿಕಲ ಮೀಸಲಾತಿಯನ್ನು ಅನ್ವಯಿಸಿರುವುದಿಲ್ಲ, ಆದುದರಿಂದ, ಅಂಗವಿಕಲ ಅಭ್ಯರ್ಥಿಗಳು ಈ ಹುದ್ದೆಗೆ ಅರ್ಜಿಸಲ್ಲಿಸಲು ಅರ್ಹರಲ್ಲ.**

**13. ಯೋಜನಾ ನಿರಾಶ್ರಿತ ಅಭ್ಯರ್ಥಿ :**

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಸೂಚನೆ: 1) ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.**

2) ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳು ಮಾಹಿತಿ ಪುಸ್ತಕದಲ್ಲಿ ನೋಡತಕ್ಕದ್ದು.

**14. ನೇಮಕಾತಿ ವಿಧಾನ:**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ಅದರ ತಿದ್ದುಪಡಿಗಳನ್ವಯ ತಾಂತ್ರೀಕೇತರ ಹುದ್ದೆಗಳಾದ ಈ ಹುದ್ದೆಗಳಿಗೆ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಯನ್ನು ಕೆಳಕಂಡ ರೀತಿಯಲ್ಲಿ ನಡೆಸುತ್ತದೆ.

(ಅ) ಈ ಸ್ಪರ್ಧಾತ್ಮಕ ಪರೀಕ್ಷೆಯು ವಸ್ತು ನಿಷ್ಠ ಬಹು ಆಯ್ಕೆ(Objective Multiple Choice) ಮಾದರಿಯದಾಗಿದೆ. ತಲಾ 200 ಅಂಕಗಳ 02 ಲಿಖಿತ ಪತ್ರಿಕೆಗಳಿರುತ್ತವೆ. ಅವು:–

**ಪತ್ರಿಕೆ–1(ಸಾಮಾನ್ಯ ಪತ್ರಿಕೆ) (General Paper)-200 ಅಂಕಗಳು– 1 1/2 ಘಂಟೆ:**

ನಿಗದಿತ ವಿದ್ಯಾರ್ಹತೆಯ ಪರೀಕ್ಷೆಯಲ್ಲಿ ತೇರ್ಗಡೆಯಾದ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯ ಜ್ಞಾನದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನ ಮತ್ತು ದಿನನಿತ್ಯ ಗಮನಿಸಬಹುದಾದ ವಿಷಯಗಳು ಹಾಗೂ ಪ್ರಾಯೋಗಿಕ ಜ್ಞಾನವನ್ನು ಒಳಗೊಂಡಿರುತ್ತದೆ.

**ಪತ್ರಿಕೆ–2(ನಿರ್ದಿಷ್ಟ ಪತ್ರಿಕೆ) (Specific Paper)–200ಅಂಕಗಳು– 2ಘಂಟೆ:**

ಈ ಹುದ್ದೆಗಳ ಕಾರ್ಯ ಸ್ವರೂಪಕ್ಕೆ ಸಂಬಂಧಿಸಿದ ಪಠ್ಯಕ್ರಮವನ್ನು ಒಳಗೊಂಡಿರುತ್ತದೆ. ((ಪಠ್ಯಕ್ರಮವನ್ನು ಅನುಬಂಧ–4 ಮತ್ತು 5ರಲ್ಲಿ ತೋರಿಸಲಾಗಿದೆ.)

**ಸೂಚನೆ**: ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

(ಆ) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸುವ ಒಟ್ಟು ಅಂಕಗಳ ಶೇಕಡಾವಾರು ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು.

(ಇ) ಈ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕಗಳನ್ನು ಗಳಿಸಿದರೆ, ಅಂಕಗಳ ಅರ್ಹತಾ ಪಟ್ಟಿ ತಯಾರಿಸುವಾಗ ಅಂತಹ ಅಭ್ಯರ್ಥಿಗಳ ಅರ್ಹತೆಯನ್ನು ವಯಸ್ಸಿನ ಆಧಾರದ ಮೇಲೆ ನಿಗದಿಪಡಿಸಬೇಕು. ವಯಸ್ಸಿನಲ್ಲಿ ಹಿರಿಯರಾದವರನ್ನು ಅರ್ಹತಾ ಪಟ್ಟಿಯಲ್ಲಿ ಹಿರಿಯರೆಂದು ತೋರಿಸಲಾಗುವುದು.

(ಈ) **ಕಡ್ಡಾಯ ಕನ್ನಡ ಪರೀಕ್ಷೆ**: (ಪಠ್ಯಕ್ರಮವನ್ನು ಅನುಬಂಧ–3ರಲ್ಲಿ ನೋಡತಕ್ಕದ್ದು)ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

(ಉ) ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆ/ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿದ್ದರೆ ಅಥವಾ ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಬಗ್ಗೆ ವಿನಾಯಿತಿ ನೀಡಲಾಗುವುದು.

(ಊ) ಕಡ್ಡಾಯ ಕನ್ನಡ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳ ಸಾಮಾನ್ಯ ಪತ್ರಿಕೆ ಮತ್ತು ನಿರ್ದಿಷ್ಟ ಪತ್ರಿಕೆಗಳನ್ನು ಮಾತ್ರ ಮೌಲ್ಯಮಾಪನ ಮಾಡಲಾಗುವುದು. ಕನ್ನಡ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಗಳಿಸದ ಅಭ್ಯರ್ಥಿಗಳ ಸಾಮಾನ್ಯ ಮತ್ತು ನಿರ್ದಿಷ್ಟ ಪತ್ರಿಕೆಯ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ

(ಋ) ರಾಜ್ಯದ ಮೀಸಲಾತಿ ನಿಯಮಾನುಸಾರ 'ಅ' ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ 1:5ರ ಅನುಪಾತದಲ್ಲಿ ತಯಾರಿಸಿದ ಪಟ್ಟಿಯ ಅರ್ಹ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

(ಎ) ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5ರಷ್ಟು ಅಂಕಗಳು ಸಂದರ್ಶನದ ಗರಿಷ್ಠ ಅಂಕಗಳಾಗಿರುತ್ತದೆ.

**ಸಂದರ್ಶನ**:– ಸಂದರ್ಶನಕ್ಕೆ ಅರ್ಹರಾಗುವ ಅಭ್ಯರ್ಥಿಗಳ ಸಂದರ್ಶನವನ್ನು ಆಯೋಗವು ನಡೆಸಿ ಸಂದರ್ಶನದಲ್ಲಿ ಅವರು ವ್ಯಕ್ತಪಡಿಸುವ ಸಾಮರ್ಥ್ಯತೆಯ ಅನುಸಾರ ನೀಡುವ ಅಂಕಗಳು ಸಂದರ್ಶನ ನಡೆದ ದಿನ ಅಥವಾ ಮುಂದಿನ ದಿನದಂದು ಆದರೆ, ಆ ದಿನದ ಸಂದರ್ಶನ ಪ್ರಾರಂಭವಾಗುವ ಮುನ್ನ ಕಛೇರಿಯ ಪ್ರಕಟಣಾ ಫಲಕದಲ್ಲಿ ಪ್ರಕಟಿಸಲಾಗುವುದು. ಆಯೋಗದ ಕಛೇರಿ ಹೊರತು ಪಡಿಸಿ ಬೇರೆ ಸ್ಥಳದಲ್ಲಿ ಸಂದರ್ಶನ ನಡೆದರೆ ಆ ಸ್ಥಳಗಳಲ್ಲಿಯೂ ಸಹ ಅಭ್ಯರ್ಥಿಗಳು ಸಂದರ್ಶನದಲ್ಲಿ ಪಡೆದ ಅಂಕಗಳ ಪಟ್ಟಿ ಪ್ರಕಟಿಸಲಾಗುವುದು.

**ಟಿಪ್ಪಣಿ:** – ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

15. ಅ) **ಕನ್ನಡ ಭಾಷಾ ಪರೀಕ್ಷೆ/ಸ್ಪರ್ಧಾತ್ಮಕ ಪರೀಕ್ಷೆ ನಡೆಯುವ ಸ್ಥಳಗಳು ಹಾಗೂ ಸಮಯ:**

| ಸ್ಥಳ | ಪತ್ರಿಕೆ | ಸಂಭವನೀಯ ದಿನಾಂಕ | ಸಮಯ |
|---|---|---|---|
| 1.ಬೆಂಗಳೂರು<br>2.ಮೈಸೂರು<br>3.ಧಾರವಾಡ<br>4.ಗುಲ್ಬರ್ಗಾ | ಕಡ್ಡಾಯ ಕನ್ನಡ ಪತ್ರಿಕೆಯ ಪರೀಕ್ಷೆ<br>ಸಾಮಾನ್ಯ ಪತ್ರಿಕೆ<br>ನಿರ್ದಿಷ್ಟ ಪತ್ರಿಕೆ | 2009ರ ಜೂನ್ ತಿಂಗಳು | ಬೆಳಿಗ್ಗೆ 10:00ರಿಂದ 01:00ರವರೆಗೆ<br>ಬೆಳಿಗ್ಗೆ 10:00ರಿಂದ 11:30ರವರೆಗೆ<br>ಮದ್ಯಾಹ್ನ 02:00ರಿಂದ04:00ರವರೆಗೆ |

**16. ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಬಾರದು.** ಆದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು/ದಾಖಲಾತಿಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಚಾಲ್ತಿಯಲ್ಲಿರುವಂತೆ ಪಡೆದುಕೊಂಡಿರಬೇಕು ಹಾಗೂ ಆಯೋಗವು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಸಂಬಂಧಪಟ್ಟ ಪ್ರಮಾಣ ಪತ್ರಗಳ ಮೂಲ ಪತ್ರಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು; ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.

ಅ) **ಕಡ್ಡಾಯವಾಗಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ : ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.**

ಆ) **ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದು ಪಡಿಸಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.**

**ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:**

1. ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಬ್ಯಾಚುಲರ್ ಪದವಿಯ ಪ್ರಮಾಣ ಪತ್ರಗಳು.
2. ಗ್ರಾಮ ಪಂಚಾಯಿತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರು (ಗ್ರೇಡ್–2) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.
3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ (ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)

**ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು :**

1. ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

   **ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.
2. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರವರಿಂದ ಪಡೆದಿರುವ ಪ್ರಮಾಣ ಪತ್ರ.
3. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ಆಯೋಗಕ್ಕೆ ಸಲ್ಲಿಸತಕ್ಕದ್ದು.
4. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು.

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 286333 ಏಪ್ರಿಲ್ 1983 ರ ಪ್ರಕಾರ ಮೇಲ್ಕಂಡ ಅಭ್ಯರ್ಥಿಯ ಜನ್ಮ ದಿನಾಂಕವು 22.07.1966 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
6. ಅಭ್ಯರ್ಥಿಯು ತಮ್ಮ Pass port Sizeನ ಎರಡು ಇತ್ತೀಚಿನ ಫೋಟೋಗಳನ್ನು ತಾವು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದು ಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ, ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು, 1966 ರಲ್ಲಿನ ನಿಯಮ 28 ರ ರೀತ್ಯಾ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣೆ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
15. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು

1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ–1 ಅನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.

16. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
17. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
18. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
19. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
20. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ–2 ಅನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
21. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.
22. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಯ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಉಲ್ಲೇಖ (6)ರ ಸರ್ಕಾರದ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ಸರ್ಕಾರದ ಉಲ್ಲೇಖ (9)ರ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಉಲ್ಲೇಖ (9)ರ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 19

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಅಲ್ಪಾವಧಿ ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**
**ಐಎಫ್‌ಟಿ ಸಂಖ್ಯೆ:ಕೆಪಿಡಬ್ಲ್ಯುಡಿ:2008–09:ವರ್ಕ್ ಇಂಡೆಂಟ್:14:ಇ–ಪ್ರೊಕ್ಯೂರ್‌ಮೆಂಟ್:ಎಇ–1,**
**ದಿನಾಂಕ: 26ನೇ ಡಿಸೆಂಬರ್ 2008**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಅಲ್ಪಾವಧಿ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಠ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.

2. ದಿನಾಂಕ: 12.1.2009 ರಿಂದ 19.1.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ

ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.

4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 19.1.2009ರ ಅಪರಾಹ್ನ 4.00 ಗಂಟೆ (16:00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ರೂ.ಲಕ್ಷ ಗಳಲ್ಲಿ) | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|---|
| 1 | **3054 ರಸ್ತೆ ಮತ್ತು ಸೇತುವೆ (ಯೋಜನೆ) ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿ ಯೋಜನೆ** ಪುತ್ತೂರು ತಾಲ್ಲೂಕಿನಲ್ಲಿ ಹಂಟ್ಯಾರ್ – ಬೆಟ್ಟಂಪಾಡಿ ಜಿಲ್ಲಾ ಮುಖ್ಯ ರಸ್ತೆ ಕಿ.ಮೀ. 5.60 (ಬೈಲಾಡಿ) ರಲ್ಲಿ ನಿರ್ಮಿಸಿರುವ ಸೇತುವೆಗೆ ಕೂಡು ರಸ್ತೆ ಕಾಮಗಾರಿ | 73.00 | 1.46 | 2,500.00 | 6 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 21 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಮಂಗಳೂರು ವಿಭಾಗ, ಮಂಗಳೂರು**
**ಇ–ಟೆಂಡರ್ – ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**
**ಐಎಫ್‌ಟಿ ಸಂಖ್ಯೆ:ಕೆಪಿಡಬ್ಲ್ಯುಡಿ:2008–09:ವರ್ಕ್ ಇಂಡೆಂಟ್:15:ಇ–ಪ್ರೊಕ್ಯೂರ್‌ಮೆಂಟ್:ಎಇ–1,**
**ದಿನಾಂಕ: 30ನೇ ಡಿಸೆಂಬರ್ 2008**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಅಲ್ಪಾವಧಿ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಠ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.
2. ದಿನಾಂಕ: 19.1.2009 ರಿಂದ 30.1.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.
4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 30.1.2009ರ ಅಪರಾಹ್ನ 4.00 ಗಂಟೆ (16:00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ರೂ.ಲಕ್ಷ ಗಳಲ್ಲಿ) | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|---|
| | **ಲೆಕ್ಕ ಶೀರ್ಷಿಕೆ 4202 ಶಿಕ್ಷಣ** | | | | |
| 1 | ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 1.50 | 2500.00 | 12 ತಿಂಗಳು |
| 2 | ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿಯಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸಭಾಂಗಣ ರಚನೆ, ಎರಡು ಹೆಚ್ಚುವರಿ ಕೊಠಡಿ, ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗಾಗಿ ಶೌಚಾಲಯ ನಿರ್ಮಾಣ ಹಾಗೂ ಕಾಲೇಜು ಮೈದಾನದಲ್ಲಿ ಕ್ರೀಡಾಂಗಣ ನಿರ್ಮಾಣ ಮಾಡುವುದು (2ನೇ ಕರೆ) | 62.00 | 1.24 | 2500.00 | 12 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 22 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಮಂಗಳೂರು ವಿಭಾಗ, ಮಂಗಳೂರು**
**ಅಲ್ಪಾವಧಿ ಟೆಂಡರ್ ಪ್ರಕಟಣೆ**
**ಸಂಖ್ಯೆ:8:ಜಿಎನ್‌ಎಲ್:ಟಿ.ಎನ್‌ಡಿ(16):2008–09:ಎಇ–1, ದಿನಾಂಕ: 3ನೇ ಜನವರಿ 2009**

ಈ ಕೆಳಕಂಡ ಕಾಮಗಾರಿಗಳಿಗೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 21.1.2009ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 19.1.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಯನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 19.1.2009ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಸೇರಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| | **ಲೆಕ್ಕ ಶೀರ್ಷಿಕೆ 2059 ಯೋಜನೇತರ ಅಡಿಯಲ್ಲಿ** | | | | | | |
| 1 | ಮಂಗಳೂರು ತಾಲ್ಲೂಕಿನ ಮೂಡಬಿದೆರೆಯಲ್ಲಿರುವ ನಾಡ ಕಛೇರಿಗೆ ಹೆಚ್ಚುವರಿ ಕೊಠಡಿ ನಿರ್ಮಾಣ | 9.50 | 3ನೇ ದರ್ಜೆ ಮತ್ತು ಮೇಲ್ಪಟ್ಟು | 23,750.00 | 6 ತಿಂಗಳು | ದರವಾರು | 1650.00 |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಸೇರಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 2 | ಮಂಗಳೂರು ತಾಲ್ಲೂಕಿನ ಮುಲ್ಕಿಯಲ್ಲಿರುವ ಉಪನೋಂದಣಾಧಿಕಾರಿ ಕಛೇರಿಗೆ ಹೆಚ್ಚುವರಿ ಕೊಠಡಿ ನಿರ್ಮಾಣ | 9.20 | 3ನೇ ದರ್ಜೆ ಮತ್ತು ಮೇಲ್ಪಟ್ಟು | 23,000.00 | 6 ತಿಂಗಳು | ದರವಾರು | 1650.00 |
| | **ಲೆಕ್ಕ ಶೀರ್ಷಿಕೆ 4202 ಯೋಜನೆ ಅಡಿಯಲ್ಲಿ** | | | | | | |
| 1 | ಬಂಟ್ವಾಳ ತಾಲ್ಲೂಕು ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡಕ್ಕೆ ಶೌಚಾಲಯ ನಿರ್ಮಾಣ ಮತ್ತು ಕಟ್ಟಡ ದುರಸ್ತಿ | 3.42 | 4ನೇ ದರ್ಜೆ ಮತ್ತು ಮೇಲ್ಪಟ್ಟು | 8,600.00 | 2 ತಿಂಗಳು | ದರವಾರು | 1100.00 |
| | **ಲೆಕ್ಕ ಶೀರ್ಷಿಕೆ 3054 ಯೋಜನೆ ಅಡಿಯಲ್ಲಿ** | | | | | | |
| 1 | ಮಂಗಳೂರು ತಾಲ್ಲೂಕಿನ ಕುಪ್ಪೆಪದವು – ಇರುವೈಲು ಮೂಡಬಿದ್ರೆ ರಸ್ತೆಯ ಕಿ.ಮೀ. 0.40ರಲ್ಲಿ ಕಿರು ಸೇತುವೆಯನ್ನು ಅಗಲಗೊಳಿಸುವುದು. | 15.00 | 2ನೇ ದರ್ಜೆ ಮತ್ತು ಮೇಲ್ಪಟ್ಟು | 37,500.00 | 2 ತಿಂಗಳು | ದರವಾರು | 2750.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 30ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಬ್ಯಾಂಕ್ ಗ್ಯಾರಂಟಿ / ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ. ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್.ಸಿ.ಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಈ ಮೇಲಿನ ರಸ್ತೆ ಕಾಮಗಾರಿಗಳನ್ನು ಎಂಒಆರ್‌ಟಿಎಚ್ ಮಾದರಿ ಪ್ರಕಾರವಿರುವ ಪೇವರ್‌ಯುಕ್ತ ಹಾಟ್ ಮಿಕ್ಸ್ ಪ್ಲಾಂಟ್‌ನಿಂದ ಮಾತ್ರ ನಿರ್ವಹಿಸತಕ್ಕದ್ದು.
5. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
6. ಗುತ್ತಿಗೆದಾರರು ಉಕ್ಕು ಸಿಮೆಂಟ್ ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳ ಸಂಗ್ರಹಕ್ಕೆ ಮತ್ತು ಯಂತ್ರೋಪಕರಣಗಳ ಹಾಗೂ ಸಾಧನ ಸಲಕರಣೆಗಳಿಗೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S) ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
7. ರಸ್ತೆ ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷಗಳ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು / ಚೈನೆಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾದರೂ ದುರಸ್ತಿಬೇಕಾದರೆ ಗುತ್ತಿಗೆದಾರ / ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ನಿರ್ವಹಿಸಿಕೊಡಬೇಕು.
8. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
9. ಕೆಲಸದ ಕುರಿತಾದ ಯಾವುದೇ ಇತರ ವಿವರಗಳನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್

ಪಿ.ಆರ್. 30

ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ,**
**ಸರ್ಕಾರಿ ಕೇಂದ್ರ ಮುದ್ರಣಾಲಯ, 8ನೇ ಮೈಲಿ, ಆರ್.ವಿ. ಕಾಲೇಜ್ ಪೋಸ್ಟ್, ಮೈಸೂರು ರಸ್ತೆ,**
**ಬೆಂಗಳೂರು – 560 059**

**ಟೆಂಡರ್ ಅಧಿಸೂಚನೆ**

**ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–155/2008–09, ದಿನಾಂಕ: 13ನೇ ಜನವರಿ 2009**

ಕೆ.ಟಿ.ಪಿ.ಪಿ. ಆ್ಯಕ್ಟ್ 1999 ನಿಯಮದ ಅನ್ವಯ ಅನುಭವಿ ವ್ಯಾಪಾರಿ ಸಂಸ್ಥೆಗಳಿಂದ ಈ ಕೆಳಗೆ ಸೂಚಿಸಿರುವಂತೆ ವಿಷಯಗಳಿಗೆ ಅನ್ವಯವಾಗುವಂತೆ ಟೆಂಡರ್ ಆಹ್ವಾನಿಸಲಾಗಿದೆ.

| ಕ್ರ. ಸಂ. | ವಿಷಯ | ಅಂದಾಜು ಮೌಲ್ಯ ರೂಗಳಲ್ಲಿ | ಇ.ಎಂ.ಡಿ. ಮೊತ್ತ |
|---|---|---|---|
| 1 | ಟೆಂಡರ್ ಅಧಿಸೂಚನೆ ಸಂಖ್ಯೆ DPS/PUR/P-155/2008-09, 2 ಸಂಖ್ಯೆ 4 ವರ್ಣ "ಪ್ರಿಂಟ್ ವೆಲ್" ವೆಬ್ ಆಫ್‌ಸೆಟ್ ಯಂತ್ರದ ರೀಕಂಡಿಷನಿಂಗ್ ಬಗ್ಗೆ.<br>ಸ್ಥಳ: ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು. | 5 ಲಕ್ಷ | ರೂ. 10,000/– |

ಟೆಂಡರ್ ಫಾರಂಗಳನ್ನು ಮೇಲ್ಕಂಡ ಕಛೇರಿಯಲ್ಲಿ ರೂ.200/– + ವ್ಯಾಟ್ ರೂ.25/– ಪಾವತಿಸಿ ದಿನಾಂಕ: 7.2.2009ರ ಒಳಗಾಗಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಉಳಿದ ಎಲ್ಲಾ ವಿವರಗಳು ಟೆಂಡರ್ ದಸ್ತಾವೇಜುವಿನಲ್ಲಿ ಲಭ್ಯವಿರುತ್ತದೆ.

ನಿರ್ದೇಶಕರು

**OFFICE OF THE DIRECTOR PRINTING, STATIONERY AND PUBLICATIONS**
**8th Mile, R.V. College Post, Mysore Road, Bengaluru - 560 059**

**BRIEF TENDER NOTIFICATION**

**No. DPS/PUR/D-155/2008-09, Dated: 13th January 2009**

Tenders are invited from Eligible Experienced Firms under KTPP Act 1999 and rules made thereunder for the following

| Schedule | Sl. No. | Particulars | Estimated Value | E.M.D. Rs. |
|---|---|---|---|---|
| No.1 | 1 | Tender Notification No. DPS/PUR/P-155/2008-09, Reconditioning of 2 Nos. of 4 Colour "Printwell" Web Offset Machine at Government District Press, Tumkur. | 5 Lakhs | Rs. 10,000/- |

The Tender Forms are available for Rs.200/- + Rs.25/- being the VAT @ 12.5% upto dated 7.2.2009 at the above office during the office hours. All the other details available in the tender Document.

P.R. 37 Director

**ಜಿಲ್ಲಾ ಸರ್ಜನರವರ ಕಾರ್ಯಾಲಯ, ಸರ್ಕಾರಿ ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ**

**ಸಂ: ಜಿಸಮೆಆಶಿ/ಅಭಿವೃದ್ಧಿ/ಟೆಂಡರ್/1/08–09, ದಿನಾಂಕ: 24ನೇ ಡಿಸೆಂಬರ್ 2008**

**ವಿಷಯ:** ಶಿವಮೊಗ್ಗ ಜಿಲ್ಲಾ ಮೆಗ್ಗಾನ್ ಆಸ್ಪತ್ರೆಗೆ 2009–10ನೇ ಸಾಲಿಗೆ ಅಕ್ಕಿ, ಸಕ್ಕರೆ, ಆಹಾರ ಪದಾರ್ಥಗಳು ಮತ್ತು ಬ್ರೆಡ್ ಹಾಗೂ ಅವಶ್ಯಕ ವಸ್ತುಗಳ ಸರಬರಾಜಿಗಾಗಿ ಟೆಂಡರ್ ಪ್ರಕಟಣೆ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಶಿವಮೊಗ್ಗ ಸರ್ಕಾರಿ ಜಿಲ್ಲಾ ಮೆಗ್ಗಾನ್ ಆಸ್ಪತ್ರೆಯ 2009–10ನೇ ಸಾಲಿಗೆ ಅಂದರೆ (1–4–2009 ರಿಂದ 31–3–2010 ರವರೆಗೆ) ಅಕ್ಕಿ, ಸಕ್ಕರೆ, ಆಹಾರ ಪದಾರ್ಥಗಳು ಹಾಗೂ ಬ್ರೆಡ್ ಮತ್ತು ಅವಶ್ಯಕ ವಸ್ತುಗಳ ಸರಬರಾಜಿಗೆ ಈ ಕೆಳಗೆ ನಮೂದಿಸಿದಂತೆ ಮೊಹರು ಮಾಡಲಾದ ಎರಡು ಲಕೋಟೆಯಲ್ಲಿ ಟೆಂಡರ್‌ಗಳನ್ನು ಕರೆಯಲಾಗಿದೆ, ಮೆಗ್ಗಾನ್ ಆಸ್ಪತ್ರೆಯಲ್ಲಿ ಸಂಬಂಧಿಸಿದ ನಿಗದಿತ ನಮೂನೆಗಳನ್ನು ಪಡೆಯಲು ದಿನಾಂಕ: 25/1/2009ರ ಸಂಜೆ

4–00ಕ್ಕೆ ಕೊನೆಯ ದಿನಾಂಕವಾಗಿದೆ. ಭರ್ತಿ ಮಾಡಿದ, ಸೀಲು ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 29/01/09ರ ಬೆಳಿಗ್ಗೆ 11–00 ಗಂಟೆಯವರೆಗೆ ಮಾತ್ರ ಸ್ವೀಕರಿಸಲಾಗುವುದು. ಟೆಂಡರ್ ತೆರೆಯುವ ಸಮಯ ಅದೇದಿನ ಬೆಳಿಗ್ಗೆ 11–30 ಗಂಟೆಗೆ ಒಂದು ವೇಳೆ ಸದರಿ ದಿನಾಂಕದಂದು ಸರ್ಕಾರಿ ರಜೆ ಘೋಷಣೆಯಾದಲ್ಲಿ ಮುಂದಿನ ಕರ್ತವ್ಯ ದಿನದಂದು ಟೆಂಡರ್ ತೆರೆಯಲಾಗುವುದು.

| ಕ್ರ. ಸಂ. | ವಿವರಗಳು | ಪ್ರಮಾಣ (ವಾರ್ಷಿಕ) | ಅಂದಾಜು ಮೊತ್ತ | ಷರಾ |
|---|---|---|---|---|
| 1. | ಅಕ್ಕಿ (ಸೋನಾಮಸೂರಿ) | 30000 ಕೆಜಿ | 900000–00 | |
| 2. | ಸಕ್ಕರೆ (ಹರಳು ರೂಪದ) | 8000 ಕೆಜಿ | 160000–00 | |
| 3. | ಬ್ರೆಡ್ (ಪ್ರಥಮ ದರ್ಜೆ ಹೋಳುಮಾಡಿದ) | 30000 ಕೆಜಿ | 108000–00 | |
| 4. | ಆಹಾರ ಪದಾರ್ಥಗಳು | ಬೇಡಿಕೆಯಂತೆ | 1680000–00 | |
| 5. | ಅವಶ್ಯಕ ವಸ್ತುಗಳು | ಬೇಡಿಕೆಯಂತೆ | 250000–00 | |

ನಿಗದಿಪಡಿಸಿದ ಟೆಂಡರ್ ಫಾರಂಗಳನ್ನು ಮೆಗ್ಗಾನ್ ಆಸ್ಪತ್ರೆಯಲ್ಲಿ ಕಾರ್ಯಾಲಯದಲ್ಲಿ ಕೆಲಸದ ವೇಳೆಯಲ್ಲಿ ದಿನಾಂಕ: 25/01/09 ರ ಒಳಗಾಗಿ ಪಡೆಯತಕ್ಕದ್ದು. ಒಂದು ಪ್ರತಿಗೆ 25–00 ರೂ.ನಂತೆ (ಇಪ್ಪತ್ತೈದು ರೂಪಾಯಿಗಳು ಮಾತ್ರ) ನಾಲ್ಕು ಪ್ರತಿಗಳಿಗೆ ಒಟ್ಟು ರೂ.100–00 (ಒಂದು ನೂರು ರೂಪಾಯಿಗಳು ಮಾತ್ರ) ಪಾವತಿ ಮಾಡಿ ಪಡೆಯಬಹುದು.

**ಷರತ್ತುಗಳು:**

1. ಸೂಚಿಸಿದ ದಿನಾಂಕ ಮತ್ತು ಸಮಯವನ್ನು ಮೀರಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಮೌಲ್ಯದ ಶೇ.5 ರಷ್ಟು ಮುಂಗಡ ಹಣವನ್ನು (ಇ.ಎಂ.ಡಿ) ಕಡ್ಡಾಯವಾಗಿ ಖಜಾನೆಗೆ ಜಮೆ ಮಾಡಿದ ಮೂಲ ಚಲನ್ ಸಲ್ಲಿಸುವುದು.
3. ಟೆಂಡರ್ ಸಲ್ಲಿಸುವ ದಿನಾಂಕಕ್ಕೆ ಮುಂಚಿತ ಮೂರು ತಿಂಗಳುಗಳೊಳಗಿನ ರೆವೆನ್ಯೂ ಅಥಾರಿಟೀಸ್/ಲೋಕಲ್ ಬಾಡಿಯಿಂದ ಪಡೆದ ಟೆಂಡರ್ ಬೆಲೆಯ ಶೇ.25 ರಷ್ಟು ಸಾಲ್ವೆನ್ಸಿ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು. (ಜಂಟೀ ಸಾಲ ತೀರಿಸಿಕೊಳ್ಳುವ ಯೋಗ್ಯತಾ ಪತ್ರ ಪರಿಗಣಿಸಲಾಗುವುದಿಲ್ಲ) ಸಹಕಾರಿ ಸಂಘಗಳು ಭಾಗವಹಿಸಬೇಕಾದಲ್ಲಿ ಆ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಂದ ಅಂಗೀಕರಿಸಿರುವ ದಡೂತಿ ದೃಢೀಕರಣ ಪತ್ರವನ್ನು ಸಲ್ಲಿಸತಕ್ಕದ್ದು.
4. ಬ್ರೆಡ್ ಟೆಂಡರ್‌ದಾರರು ಚಾಲ್ತಿ ಬೇಕರಿ ಲೈಸನ್ಸ್ ಪ್ರತಿ ಲಗತ್ತಿಸತಕ್ಕದ್ದು.
5. ಆದಾಯ ತೆರಿಗೆ ಬಾಕಿ ರಹಿತ ಪ್ರಮಾಣ ಪತ್ರ ಟೆಂಡರ್ ಸಲ್ಲಿಸುವ ದಿನಾಂಕಕ್ಕೆ ಹಿಂದಿನ ನಾಲ್ಕು ವರ್ಷಗಳದ್ದು ಇರತಕ್ಕದ್ದು.
6. ಮಾರಾಟ ತೆರಿಗೆ ರಹಿತ ಪ್ರಮಾಣ ಪತ್ರ ಟೆಂಡರ್ ಸಲ್ಲಿಸುವ ದಿನಾಂಕಕ್ಕೆ ನಾಲ್ಕು ವರ್ಷಗಳದ್ದು ಇರತಕ್ಕದ್ದು.
7. ದರ ಮತ್ತು ಬೆಲೆಗಳನ್ನು ಅಂಕಿ ಮತ್ತು ಅಕ್ಷರದಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು, ತಿದ್ದುಪಡಿಯಾದಲ್ಲಿ ದೃಢೀಕರಿಸತಕ್ಕದ್ದು.
8. ಯಶಸ್ವಿ ಗುತ್ತಿಗೆದಾರರು ಶೇ.10 ರಷ್ಟು ನಿಶ್ಚಿತ ಭದ್ರತಾ ಠೇವಣಿಯನ್ನು ಗೊತ್ತುಪಡಿಸಿದ ದಿನಾಂಕದೊಳಗೆ ಸಲ್ಲಿಸತಕ್ಕದ್ದು.
9. ಗುತ್ತಿಗೆದಾರರು ಸರಬರಾಜು ಮಾಡಬೇಕಾಗಿರುವ ಪದಾರ್ಥಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿ ಆಸ್ಪತ್ರೆಗೆ ಸೂಚಿಸುವ ಸ್ಥಳಕ್ಕೆ ಸರಬರಾಜು ಮಾಡುವುದು.
10. ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಜಿಲ್ಲಾ ಸರ್ಜನರು ಹಾಗೂ ಟೆಂಡರ್ ಸಮಿತಿಯ ಪೀಠಸ್ಥರಿಗೆ ಕಾದಿರಿಸಲ್ಪಟ್ಟಿದೆ.
11. ಟೆಂಡರ್ ಸಲ್ಲಿಸುವ ಮುಂಚೆ ಕಛೇರಿಯಲ್ಲಿ ದಾಖಲು ಮಾಡಿರುವ ಅಕ್ಕಿ ಮತ್ತು ಸಕ್ಕರೆಯ ಗುಣಮಟ್ಟ ಪರಿಶೀಲಿಸಿ ಟೆಂಡರ್ ಸಲ್ಲಿಸತಕ್ಕದ್ದು.
12. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವ ಟೆಂಡರ್‌ದಾರರು ಟೆಂಡರ್‌ಗೆ ಸಂಬಂಧಿಸಿದ ಇ.ಎಂ.ಡಿ. ಮತ್ತು ದಾಖಲಾತಿಗಳ ದೃಢೀಕರಣದೊಂದಿಗೆ ಮೊದಲನೇ ಲಕೋಟೆಯಲ್ಲಿ ಹಾಗೂ ಎರಡನೇ ಲಕೋಟೆಯಲ್ಲಿ ದರ ನಮೂದಿಸಿರುವ ಟೆಂಡರ್ ಫಾರಂಗಳನ್ನು ಇಟ್ಟು ಮೊಹರುಮಾಡಿ ಟೆಂಡರ್ ನಿಯಮಾವಳಿಗೆ ಅನುಸಾರವಾಗಿ ಸಲ್ಲಿಸಬೇಕಾದ ಅವಶ್ಯಕ ದಾಖಲಾತಿಗಳನ್ನು ಒಳಗೊಂಡ ಈ ರೀತಿ ಬೇರೆ ಬೇರೆ ಎರಡು ಪ್ರತ್ಯೇಕ ಲಕೋಟೆಗಳಲ್ಲಿ

ಸಲ್ಲಿಸಬೇಕು. ಲಕೋಟೆಯ ಮೇಲೆ ಅಕ್ಕಿ, ಸಕ್ಕರೆ, ಆಹಾರ ಪದಾರ್ಥ, ಬ್ರೆಡ್ ಹಾಗೂ ಅವಶ್ಯಕ ವಸ್ತುಗಳಿಗೆ ಟೆಂಡರ್ ಎಂದು ದಪ್ಪ ಅಕ್ಷರಗಳಲ್ಲಿ ಎರಡು ಲಕೋಟೆ ನಿಯಮದಂತೆ ಲಕೋಟೆಯನ್ನು ಜಿಲ್ಲಾ ಸರ್ಜನರು, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರ ವಿಳಾಸಕ್ಕೆ ನೀಡತಕ್ಕದ್ದು. ಮೊಹರು ಮಾಡಿದ ಎರಡು ಲಕೋಟೆಯಲ್ಲಿ ಸಲ್ಲಿಸದೇ ಇದ್ದಲ್ಲಿ ಅಂತಹ ಟೆಂಡರ್‌ಗಳನ್ನು ಸ್ಥಳದಲ್ಲೇ ತಿರಸ್ಕರಿಸಲಾಗುವುದು.

13. ಟೆಂಡರ್‌ದಾರರು ಟೆಂಡರ್ ನಿಯಮಾವಳಿಗೆ ಅನುಸಾರವಾಗಿ ಸಲ್ಲಿಸಲಾದ ದಾಖಲಾತಿಗಳ ಲಕೋಟೆಯನ್ನು ಮೊದಲು ತೆರೆಯಲಾಗುವುದು. ನಿಯಮಾವಳಿಗೆ ಅನುಸಾರವಾಗಿ ಎಲ್ಲಾ ದಾಖಲಾತಿಗಳನ್ನು ಸಲ್ಲಿಸಿದ್ದರೆ ಮಾತ್ರ ಟೆಂಡರ್‌ದಾರರು ಸಲ್ಲಿಸಿದ ಟೆಂಡರ್ ಫಾರಂಗಳನ್ನೊಳಗೊಂಡ 2ನೇ ಲಕೋಟೆಯನ್ನು ತೆರೆಯಲಾಗುವುದು. ನಿಯಮಾವಳಿಗೆ ಅನುಸಾರವಾಗಿ ಇ.ಎಂ.ಡಿ. ಮೊತ್ತ ಇಲ್ಲದ ಲಕೋಟೆ ಹಾಗೂ ದಾಖಲಾತಿಗಳನ್ನು ಸಲ್ಲಿಸದೇ ಇದ್ದ ಪಕ್ಷದಲ್ಲಿ ದರಗಳನ್ನು ತುಂಬಿ ಸಲ್ಲಿಸಿದ ಟೆಂಡರ್ ಫಾರಂಗಳನ್ನು ಒಳಗೊಂಡ ಲಕೋಟೆಯನ್ನು ಪರಿಗಣಿಸಲಾಗುವುದಿಲ್ಲ.

14. ಜನತಾ ಬಜಾರ್ ಅಥವಾ ಸಹಕಾರ ಸಂಘಗಳಿಗೆ ಟೆಂಡರ್ ಅಂಗೀಕಾರವಾದಲ್ಲಿ ಶೇ.5 ರಷ್ಟು ನಿಶ್ಚಿತ ಭದ್ರತಾ ಠೇವಣಿಯನ್ನು ಗೊತ್ತುಪಡಿಸಿದ ಅವಧಿಯಲ್ಲಿ ಸಲ್ಲಿಸತಕ್ಕದ್ದು.

ಜಿಲ್ಲಾ ಸರ್ಜನರು

ಪಿ.ಡಿ. 2 ಸರ್ಕಾರಿ ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ

**ತುಮಕೂರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರ ನ್ಯಾಯಾಲಯದಲ್ಲಿ,**

**ಪಿ ಮತ್ತು ಎಸ್.ಸಿ. 55/2008**

ಅರ್ಜಿದಾರರು : ಶ್ರೀಮತಿ ಸಿ.ಎಸ್. ಸರಸ್ವತಿ ಉರುಫ್ ಪಿ.ಜೆ. ಸರಸ್ವತಿ,
ವಯಸ್ಸು 36 ವರ್ಷಗಳು,
ಕೋಂ. ಲೇ. ಪಿ.ಎನ್. ಜಯಸಿಂಹ,
2. ಕು. ಪಿ.ಜೆ. ಕೃತ್ತಿಕ
ವಯಸ್ಸು 19 ವರ್ಷಗಳು, ಬಿನ್ ಲೇ. ಪಿ.ಎನ್. ಜಯಸಿಂಹ,
3. ಕು. ಪಿ.ಜೆ. ಜಾಹ್ನವಿ
ವಯಸ್ಸು 16 ವರ್ಷಗಳು, ಬಿನ್ ಲೇ. ಪಿ.ಎನ್. ಜಯಸಿಂಹ,
ವಾಸ: "ಚಿನ್ಮಯ" 2ನೇ ಅಡ್ಡರಸ್ತೆ, ಅಶೋಕ ನಗರ,
ತುಮಕೂರು – 572 102.

– ವಿರುದ್ಧ –

ಎದುರುದಾರರು : ಯಾರೂ ಇಲ್ಲ

**ಸಾರ್ವಜನಿಕ ಪ್ರಕಟಣೆ**

ಮೇಲ್ಕಂಡ ಅರ್ಜಿದಾರಳು, ತನ್ನ ಪತಿ ಪಿ.ಎನ್. ಜಯಸಿಂಹ, ವಕೀಲರು, ಇವರು ದಿನಾಂಕ 22.05.2000 ರಲ್ಲಿ ಹೃದಯಾಘಾತದಿಂದ ಮೃತರಾಗಿರುವ ಕಾರಣ ಅವರ ಉತ್ತರ ವಾರಸುದಾರರಾಗಿ, ಅರ್ಜಿದಾರಳಾದ ಶ್ರೀಮತಿ ಸಿ.ಎಸ್. ಸರಸ್ವತಿ ಉರುಫ್ ಪಿ.ಜೆ. ಸರಸ್ವತಿ, ಮೃತ ಪಿ.ಜೆ. ಜಯಸಿಂಹರ ಹೆಂಡತಿಯಾಗಿದ್ದು ಜೊತೆಗೆ ಮಕ್ಕಳಾದ ಕು. ಕೃತ್ತಿಕ ಮತ್ತು ಕು. ಪಿ.ಜೆ. ಜಾಹ್ನವಿ ಇವರುಗಳನ್ನು ತನ್ನ ಹಾಗೂ ತನ್ನ ಆಸ್ತಿಗಳಿಗೆ ವಾರಸುದಾರರನ್ನಾಗಿ ಬಿಟ್ಟು ಹೋಗಿರುತ್ತಾರೆ. ಸದರಿ ಅರ್ಜಿದಾರರು ಮೃತ ಶ್ರೀಮತಿ ನಂಜಮ್ಮ ಶ್ರೀಕಂಠನ್ ರವರು ದಿನಾಂಕ: 09.09.1995 ರಂದು ಮಾಡಿಟ್ಟಿರುವ ವಿಲ್ ಮೂಲಕ ಮೃತ ಪಿ.ಎನ್. ಜಯಸಿಂಹರವರ ಹೆಸರಿಗೆ ಬಿಟ್ಟು ಹೋಗಿರುವ ಸ್ಥಿರಾಸ್ತಿಯನ್ನು ಪಡೆಯುವುದಕ್ಕಾಗಿ ಪ್ರೊಬೇಟ್ ಸರ್ಟಿಫಿಕೇಟ್ ಕೋರಿ ಮೇಲ್ಕಂಡ ನ್ಯಾಯಾಲಯದಲ್ಲಿ ಸದರಿ ಅರ್ಜಿಯನ್ನು ಸಲ್ಲಿಸಿರುತಾರೆ. ಆದ್ದರಿಂದ ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಮೇಲ್ಕಂಡವರಿಗೆ ಬೇರೆ ಯಾರಾದರೂ ತಾವು ಸಂಬಂಧಿಗಳೆಂದು ಭಾವಿಸಿದ್ದಲ್ಲಿ ಅಂತಹ ವ್ಯಕ್ತಿಗಳು ದಾಖಲೆಗಳ ಸಹಿತ, ತಾವಾಗಲೀ, ತಮ್ಮ ಪರ ವಕೀಲರ ಮೂಲಕವಾಗಿಯಾಗಲೀ ಬಂದು ಈ ಪ್ರಕಟಣೆಯ ದಿನಾಂಕದಿಂದ ದಿನಗಳೊಳಗಾಗಿ ಮೇಲ್ಕಂಡ ನ್ಯಾಯಾಲಯದಲ್ಲಿ ದಿನಾಂಕ: 7.2.2009 ರಂದು 11 ಗಂಟೆಯೊಳಗೆ ಅಥವಾ ಮುಂಚಿತವಾಗಿ ಅರ್ಜಿ ಸಲ್ಲಿಸುವ ಮೂಲಕ ಪಕ್ಷಕಾರರಾಗಿ ಸೇರಿಕೊಂಡು ತಮ್ಮ ಹೇಳಿಕೆ ಕೊಡಬೇಕೆಂದು ತಿಳಿಸಿದೆ. ನ್ಯಾಯಾಲಯವು ನಿಗದಿಪಡಿಸಿದ ದಿನಾಂಕದಂದು ಬಾರದಿದ್ದಲ್ಲಿ ಯಾರಿಂದಲೂ, ಯಾವುದೇ ರೀತಿಯ ತಕರಾರು ಇಲ್ಲವೆಂದು ಪರಿಗಣಿಸಿ ಅರ್ಜಿಯಲ್ಲಿ ಕೋರಿರುವಂತೆ ಮಂಜೂರು ಮಾಡಲಾಗುವುದು.

ಸ್ವತ್ತಿನ ವಿವರ

ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಕೊರಟಗೆರೆ ಟೌನ್ ನಲ್ಲಿರುವ ಮುನಿಸಿಪಲ್ ನಂಬರ್ 276, ಅಸೆಸ್ಮೆಂಟ್ ನಂಬರ್ 235 ಉಳ್ಳ

(ಎ) ಹೆಂಚಿನ ಮನೆಯ ಅಳತೆ $42^1/_2$ ಅಡಿಗಳು x 38 ಅಡಿಗಳು

(ಬಿ) ಇದಕ್ಕೆ ಲಗತ್ತಾಗಿ ಹಿಂಭಾಗದ ಮನೆಯ ಅಳತೆ 53 ಅಡಿ x 9 ಅಡಿಗಳು,

(ಸಿ) ದನಗಳ ಕೊಟ್ಟಿಗೆ ಮನೆಯ ಅಳತೆ $8^1/_2$ ಅಡಿಗಳು, x 24 ಅಡಿಗಳು,

(ಡಿ) ವರಾಂಡದ ಅಳತೆ 8 ಅಡಿಗಳು x $12^1/_2$ ಅಡಿಗಳು, ಈ ಎಲ್ಲವೂ ಸೇರಿ ಒಟ್ಟಾಗಿ ಒಂದೇ ಚಕ್ಕುಬಂದಿ: ಪೂರ್ವಕ್ಕೆ: ಮಧುಗಿರಿ ರಸ್ತೆ; ಪಶ್ಚಿಮಕ್ಕೆ: ಮುನಿಸಿಪಲ್ ಗಲ್ಲಿ; (ಕನ್ಸರ್ವೆನ್ಸಿ); ಉತ್ತರಕ್ಕೆ: ರಾಜಗೋಪಾಲ ಶೆಟ್ಟಿಯವರ ಸ್ವತ್ತು; ದಕ್ಷಿಣಕ್ಕೆ: ಮುನಿಸಿಪಲ್ ಗಲ್ಲಿ ಮತ್ತು ಗುಂಡಪ್ಪನವರ ಮನೆ.

ನ್ಯಾಯಾಲಯದ ಆದೇಶದಂತೆ ಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ಪ್ರಕಟಣೆಗೆ ಕೊಡಲಾಗಿದೆ.

ನ್ಯಾಯಾಲಯದ ಪರವಾಗಿ,
ಚೀಫ್ ಅಡ್ಮಿನಿಸ್ಟ್ರೇಟಿವ್ ಆಫೀಸರ್,
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ನ್ಯಾಯಾಲಯ ತುಮಕೂರು.

ಪಿ.ಡಿ. 7

**WATER RESOURCES DEPARTMENT**

**(Minor Irrigation)**

**ಸಂಖ್ಯೆ: ಸನೀಇ 04 ಮಸಾವಿ 2008, ದಿನಾಂಕ: 24ನೇ ಡಿಸೆಂಬರ್ 2008**

**STATE TENDER BULLETIN**

The details of the notices inviting the tender in respect of the Procurement requirements of different procurement entities to be published as a part of the State - Tender Bulletin for the 4th week of December 2008. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
Deputy Secretary to Government
and State Tender Bulletin Officer
Water Resources Department (M.I.)

**WATER RESOURCES DEPARTMENT (MINOR IRRIGATION)**

**MINOR IRRIGATION DIVISION BIJAPUR**

**INVITATION FOR TENDERS (IFT)**

**IFT No.:EE/MID/BJP/TND/AE-1/08-09/3863, Dated: 23rd December 2008**

1. The Executive Engineer, M.I.Division, Bijapur invites tenders from eligible tenderers, for the construction of work detailed in the Table below. The tenderers may submit tenders for work given in the Table. Two Cover Tender procedure as per Rule 28 of the KTPP Act shall be followed. The Tenderers are required to submit two separate sealed covers, one containing the Earnest money deposit and the details of their capability to undertake the tender (as detailed in ITT Clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered works. The Tenderers are advised to note the minimum qualification criteria specified in Clause 3 of the Instruction to Tenderers to qualify for award of the contract.
2. Tender documents may be purchased from the office of the Executive Engineer, M.I.Division, Bijapur from 22/1/2009 to 29/1/2009 for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/ Scheduled bank payable at Bijapur in favour of The Executive Engineer, M.I.Division, Bijapur. Interested

tenderers may obtain further information at the same address. Tender documents requested by mail will be dispatched by registered/speed post on payment of an extra amount of Rs.200/- The Executive Engineer, M.I.Division, Bijapur will not be held responsible for the postal delay if any, in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered at the office of the Chief Engineer, M.I.(N)Zone, Bijapur Or office of the Superintending Engineer, M.I.Circle, Belgaum Or office of The Executive Engineer, M.I.Division Bijapur on or before 16-00 hours on 20/2/2009. The First Cover Tenders will be opened on the same day/next day at 17-00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.
5. A Pre-tender meeting will be held on 10/02/2009 at 11-00 hours at the office of The Executive Engineer, M.I.Division, Bijapur to clarify the issues if any, and to answer questions on any matter that may be raised at that stage as stated in Clause 8.2 of 'Instructions to Tenderers' of the tender document.
6. Other details can be seen in the tender documents.

**TABLE**

| Sl. No. | Name of work | Approximate value of work (Rs.) | Earnest Money Deposit (Rs) | Cost of document (Rs.) | Period of completion |
|---|---|---|---|---|---|
| 1 | Construction of Bridge cum barrage across Doddahalla near Tamba Site-II in Indi Taluka of Bijapur District | 28027309-00 | 421000-00 | 8800-00+1100 VAT=9900-00 | 11 Months including Monsoon. |

Executive Engineer,

P.R. 8 M.I.Division, Bijapur.

**ಕಾರ್ಯಪಾಲಕ ಅಭಿಯಂತರರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಕಾಪಾಇಂ/ರಾಹೆ/ಚಿ/ಸಇಂ–2/ಮಳೆ ಹಾನಿ ದುರಸ್ತಿ/ಟೆಂ.ಪ್ರ./2008–09/2931, ದಿನಾಂಕ: 29ನೇ ಡಿಸೆಂಬರ್ 2008**

1. ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರಿಂದ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಎರಡನೇ ದರ್ಜೆ ಮತ್ತು ಮೇಲ್ಪಟ್ಟ ಅರ್ಹ ಗುತ್ತಿಗೆದಾರರಿಂದ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ನ್ನು ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಆಹ್ವಾನಿಸಲಾಗಿದೆ. ಗುತ್ತಿಗೆದಾರರು ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವ ಯಾವುದೇ ಅಥವಾ ಎಲ್ಲಾ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಸಲ್ಲಿಸಬಹುದಾಗಿದೆ.
2. ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಿಂದ ದಿನಾಂಕ: 27.01.2009 ರಿಂದ 28.01.2009ರ ವರೆಗೆ ಕಛೇರಿ ಕೆಲಸದ ಸಮಯದಲ್ಲಿ (ದ್ವಿಪ್ರತಿಗಳಲ್ಲಿ) ಕೋಷ್ಟಕದಲ್ಲಿ ನಮೂದಿಸಿದ ಬೆಲೆಯನ್ನು (ಹಿಂದಿರುಗಿಸಲಾರದಂತಹದ್ದು) ನಗದಾಗಿ ಅಥವಾ ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದ ರಾಷ್ಟ್ರೀಕೃತ:ಷೆಡ್ಯೂಲ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್/ಪೇ ಆರ್ಡರ್ ನೀಡಿ ಖರೀದಿಸಬಹುದು. ಟೆಂಡರ್

ಡಾಕ್ಯುಮೆಂಟ್ಸ್‌ಗಳನ್ನು ಅಂಚೆ ಮೂಲಕ ಪಡೆಯಲಿಚ್ಛಿಸುವವರು ಪ್ರತಿ ಕಾಮಗಾರಿಗೆ ರೂ. 250–00 ಹೆಚ್ಚಿಗೆ ಪಾವತಿಸತಕ್ಕದ್ದು. ಅಂಚೆ ವಿಳಂಬಕ್ಕೆ ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರು ಹೊಣೆಗಾರರಿರುವುದಿಲ್ಲ.

3. ಟೆಂಡರ್‌ನೊಂದಿಗೆ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿದ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮುಂಗಡ ಹಣ ಠೇವಣಿ (ಇ.ಎಂ.ಡಿ.) ಯನ್ನು ಲಗತ್ತಿಸಿರಬೇಕು. ಮುಂಗಡ ಹಣ ಠೇವಣಿಯು (ಇ.ಎಂ.ಡಿ.) ಟೆಂಡರ್ ಡಾಕ್ಯುಮೆಂಟ್‌ನಲ್ಲಿ ನಿರ್ದಿಷ್ಟಪಡಿಸಿದ ಯಾವುದಾದರೂ ಒಂದು ರೂಪದಲ್ಲಿ ಇರತಕ್ಕದ್ದು ಹಾಗೂ ಇದರ ವ್ಯಾಲಿಡಿಟಿ ಟೆಂಡರ್ ವ್ಯಾಲಿಡಿಟಿ ಅವಧಿಗಿಂತ 45 ದಿನಗಳ ಹೆಚ್ಚಿನ ಅವಧಿಗೆ ಇರತಕ್ಕದ್ದು. ಅಂದರೆ ಒಟ್ಟಾರೆ 135 ದಿನಗಳ ಅವಧಿ ಇರತಕ್ಕದ್ದು.
4. ಟೆಂಡರ್‌ಗಳನ್ನು ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರಿಗೆ ದಿನಾಂಕ: 30.01.2009 ರಂದು ಸಂಜೆ 4–00 ಗಂಟೆಯೊಳಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 5–00 ಗಂಟೆಗೆ ಹಾಜರಿದ್ದ ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಒಂದು ವೇಳೆ ಅನಿವಾರ್ಯ ಕಾರಣದಿಂದ ಸದರಿ ದಿನಾಂಕವು ರಜಾದಿನವಾದರೆ ಮಾರನೆಯ ಕೆಲಸದ ದಿನ ಅದೇ ಸಮಯದಂದು ಟೆಂಡರ್‌ಗಳನ್ನು ಸ್ವೀಕರಿಸಿ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಟೆಂಡರ್ ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದು.

**ಕೋಷ್ಟಕ**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗಧಿಪಡಿಸಿರುವ ಅವಧಿ ಮಳೆಗಾಲ ಸೇರಿ | ಗುತ್ತಿಗೆದಾರರ ಅರ್ಹತೆ |
|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ – 63, ಅಂಕೋಲಾ–ಗುತ್ತಿ ಸೆಕ್ಷನ್‌ನ ಕಿ.ಮೀ. 336.00 ರಿಂದ 349.00 ರವರೆಗಿನ ರಸ್ತೆಯ ಆಯ್ದಭಾಗಗಳಲ್ಲಿ ಮಳೆಯಿಂದ ಹಾನಿಗೊಳಗಾದ ರಸ್ತೆಯ ಕ್ಯಾರೇಜ್‌ವೇನ ದುರಸ್ತಿ ಕಾಮಗಾರಿ. | 44.17 | ರೂ.88,500/– | 3000/– + 12.50 ವ್ಯಾಟ್ | 1 ತಿಂಗಳು | 2ನೇ ದರ್ಜೆಗೆ ಮೇಲ್ಪಟ್ಟು |

ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**Office of the Executive Engineer, National Highway Division, Chitradurga**

**TENDER NOTIFICATION**

**No:ENH/CTA/AE-1&2/TND-NOTI/FDR/2008-09/2931, Dated: 29th December 2008**

1. The Executive Engineer, National Highway Division, Chitradurga invites tenders from eligible tenderers, registered in Karnataka Public Works, Port and Inland Water transport Department National Highways, Bangalore for the construction of works detailed in the Table below. The tenderers may submit tenders for any or all of the works given in the Table.
2. Tender documents may be purchased from the office of the Executive Engineer, National Highway Division, Chitradurga from 27.01.2009 to 28.01.2009 for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/Scheduled bank payable at Chitradurga in favour of Executive Engineer, National Highway Division, Chitradurga, Interested tenders may obtain further information at the same address. Tender documents requested by mail will be dispatched by registered/speed post on payment of an extra amount of Rs. 250/- for each work. The Executive Engineer, National

Highway Division, Chitradurga will not be held responsible for the postal delay if any, in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered to Executive Engineer, National Highway Division, Chitradurga on or before 16 hours on 30.01.2009 (date) and will be opened on the same day at 17 hours, in the presence of the tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.
5. Other details can be seen in the tender documents.

| Sl. No. | Name of Work | Approximate Value of work (Rs.) | Earnest Money Deposit (Rs.) | Cost of document (Rs.) | Period of completion | Eligibility of the Contractor |
|---|---|---|---|---|---|---|
| 1 | Repairs to Damaged Carriageway from KM 336.00 to 349.00 (in Selected reaches) of N.H. 63, Ankola-Gooty Section under FDR | Rs. 44.17 Lakhs | Rs. 88,500/- | 3000/- + 12.50% VAT | 1 Month | Class-II and above |

Executive Engineer,
National Highway Division,
Chitradurga.

P.R. 28

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**
**ಅಂಚೆ ಪೆಟ್ಟಿಗೆ 5079, ವಿಧಾನ ಸೌಧ, ಬೆಂಗಳೂರು–560 001**
**ಅಧಿಸೂಚನೆ**
**ಸಂಖ್ಯೆ:ಕವಿಪ:ಆ–1:28:ವಾಚಾಹುಭ:2008, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2008**

ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ವಾಹನ ಚಾಲಕರ ಹುದ್ದೆಗಳನ್ನು ನೇಮಕಾತಿ ಮಾಡುವ ಸಲುವಾಗಿ ಅಧಿಸೂಚನೆ ಸಂಖ್ಯೆ: ಕವಿಪ:ಆ–1:28:ವಾಚಾಹುಭ:2008, ದಿನಾಂಕ: 09.05.2008ರಂತೆ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅರ್ಜಿಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದ ಕಾರಣ ನೇಮಕಾತಿ ಪ್ರಕ್ರಿಯೆಯನ್ನು ರದ್ದುಪಡಿಸಲಾಗಿದೆ.

ಸಭಾಪತಿಯವರ ಆದೇಶಾನುಸಾರ,
**ಎಸ್. ಬಾಲಗುರು**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು

ಪಿ.ಆರ್. 14

**ದಾವಣಗೆರೆ–ಹರಿಹರ ನಗರಾಭಿವೃದ್ದಿ ಪ್ರಾಧಿಕಾರ, ದಾವಣಗೆರೆ.**
**ಶ್ರೀ.ಡಿ.ದೇವರಾಜ ಅರಸು ಬಡಾವಣೆ, 'ಎ' ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ–577006.**
**ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿ) (ಮೂರನೇ ಕರೆ)**
**ಸಂಖ್ಯೆ.ದಾನಪ್ರಾ:ತಾಶಾ:02:ಟೆಂಪ್ರ:01:2007–08, ದಿನಾಂಕ: 24ನೇ ನವೆಂಬರ್ 2008.**

ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ದಿ ಪ್ರಾಧಿಕಾರ, ಶ್ರೀ ಡಿ.ದೇವರಾಜ್ ಅರಸು ಬಡಾವಣೆ, 'ಎ' ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ ಇವರು ವಿದ್ಯುತ್ ಇಲಾಖೆಯಲ್ಲಿ ನೊಂದಾಯಿತ ಒಂದನೇ ದರ್ಜೆ ಗುತ್ತಿಗೆದಾರರುಗಳಿಂದ ಈ ಕೆಳಗೆ ನಮೂದಿಸಿರುವ ಕಾಮಗಾರಿಗೆ ಮೊಹರಾದ ಐಟಂವಾರು ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ (ಒಂದು ಲಕೋಟೆ ತಾಂತ್ರಿಕ ಬಿಡ್ ಮತ್ತು ಎರಡನೇ ಲಕೋಟೆ ಫೈನಾನ್ಸಿಯಲ್ ಬಿಡ್ ಇರುತ್ತದೆ).

1. ಟೆಂಡರ್ ಫಾರಂಗೆ ಅರ್ಜಿ ನೀಡಲು (ನಿಗಧಿತ ಇ.ಎಂ.ಡಿ ಹಾಗೂ ಟೆಂಡರ್ ಫಾರಂ ಬೆಲೆಯೊಂದಿಗೆ) ಕೊನೆಯ ದಿನಾಂಕ 24.01.2009 ರ ಸಂಜೆ 4.00 ಗಂಟೆವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ : 29.01.2009ರ ಸಂಜೆ 4.00 ಗಂಟೆವರೆಗೆ.
3. ಬಿಡ್ ಪೂರ್ವ ಮಿಟಿಂಗ್ ದಿನಾಂಕ:02.02.2009ರಂದು ಬೆಳಿಗ್ಗೆ 11.00 ಗಂಟೆಗೆ ಸ್ಥಳ: ಸಹಾಯಕ ಕಾರ್ಯಪಾಲಕ ಅಭಿಯಂತರರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರ ಕೊಠಡಿಯಲ್ಲಿ.
4. ಭರ್ತಿ ಮಾಡಿದ ಟೆಂಡರ್ ಸಲ್ಲಿಸುವ ದಿನಾಂಕ : 05.02.2009ರ ಸಂಜೆ 4.00 ಗಂಟೆವರೆಗೆ.
5. ತಾಂತ್ರಿಕ ಬಿಡ್ ತೆರೆಯುವ ದಿನಾಂಕ 05.02.2009ರ ಸಂಜೆ 4.30 ಗಂಟೆ ನಂತರ.
6. ಆರ್ಥಿಕ ಬಿಡ್ ತೆರೆಯುವ ದಿನಾಂಕ:06.02.2009 ರಂದು ಬೆಳಿಗ್ಗೆ 11.30 ಗಂಟೆ ನಂತರ.

ಟೆಂಡರ್ ಫಾರಂ ಬೆಲೆಯನ್ನು (ಹಿಂದಿರುಗಿಸುವುದಿಲ್ಲ) ಹಾಗೂ ಇ.ಎಂ.ಡಿ.ಯ ಮೊತ್ತವನ್ನು ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರಿಗೆ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು, ಮೊಹರು ಮಾಡಿದ ಟೆಂಡರುಗಳ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಬರೆದಿರಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಟೆಂಡರ್ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಪತ್ರದ ಬೆಲೆ ರೂ.ಗಳಲ್ಲಿ | ಕೆಲಸ ಪೂರ್ಣ ಗೊಳಿಸುವ ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1. | ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರದಿಂದ ರಚಿಸಿರುವ ಶ್ರೀ ಜೆ.ಹೆಚ್. ಪಟೇಲ್ ಬಡಾವಣೆಯಲ್ಲಿ ವಿದ್ಯುತ್ತೀಕರಣ ಕಾಮಗಾರಿಯನ್ನು ನಿರ್ವಹಿಸುವುದು (ಗ್ರಾಮಾಂತರ ಉಪವಿಭಾಗ ಓ ಅಂಡ್ ಎಂ ವ್ಯಾಪ್ತಿಗೆ ಒಳಪಡುವ) | 2,08,06,541–00 | 3,12,098–00 | 20,000+ ತೆರಿಗೆ | 6 ತಿಂಗಳು (ಮಳೆಗಾಲ ಸೇರಿ) | 1 ದರ್ಜೆ |

**ಷರತ್ತುಗಳು:**

1. ಅರ್ಜಿಯೊಂದಿಗೆ ಲೈಸನ್ಸ್, ಕಾಮಗಾರಿ ನೆರವೇರಿಸಿರುವ ದೃಢೀಕರಣ ಪತ್ರ, ಆದಾಯ ತಿರುವಳಿ, ಇತರೆ ದಾಖಲೆ ಪತ್ರಗಳನ್ನು ಲಗತ್ತಿಸತಕ್ಕದ್ದು.
2. ಈ ಮೇಲಿನ ಕಾಮಗಾರಿಯ ಮೊತ್ತದ ಶೇ.80ರಷ್ಟು (ರೂ.1,66,45,233–00ಗಳು) ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಕನಿಷ್ಠ ಒಂದು ಕಾಮಗಾರಿಯನ್ನು ಕಳೆದ ಮೂರು ವರ್ಷದ ಅವಧಿಯಲ್ಲಿ ನಿರ್ವಹಿಸಿರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು (Work done Certificate) ಹಾಜರು ಪಡಿಸಬೇಕು. ಸದರಿ ಪ್ರಮಾಣ ಪತ್ರ ಹಾಜರುಪಡಿಸಿದಂತಹ ಗುತ್ತಿಗೆದಾರರು/ಸಂಸ್ಥೆಗಳಿಗೆ ಮಾತ್ರ ಟೆಂಡರ್ ಫಾರಂಗಳನ್ನು ನೀಡಲಾಗುವುದು.
3. ಕಳೆದ ಎರಡು ವರ್ಷಗಳ ಅವಧಿಯಲ್ಲಿ ಗುತ್ತಿಗೆದಾರರ ಆರ್ಥಿಕ ವಹಿವಾಟು ಕನಿಷ್ಠ ರೂ.264.00 ಲಕ್ಷ ಇರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರ್ ಪಡಿಸಬೇಕು.
4. ಯಾವುದೇ ಕಾರಣ ನೀಡದೆ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ/ತಿರಸ್ಕರಿಸುವ ಹಕ್ಕನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿರುತ್ತದೆ.
5. ಮುಂದೆ ಬದಲಾಗಬಹುದಾದ ನಿಯಮಗಳಿಗೆ ಹಾಗೂ ಹೆಚ್ಚಿನ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು ಹಾಗೂ ಹೆಚ್ಚಿನ ವಿವರಗಳನ್ನು ಕೆಲಸದ ದಿನಗಳಲ್ಲಿ ಪ್ರಾಧಿಕಾರದ ಸಹಾಯಕ ಕಾರ್ಯಪಾಲಕ ಅಭಿಯಂತರರನ್ನು ಸಂಪರ್ಕಿಸಿ ಪಡೆಯಬಹುದಾಗಿದೆ.

ಆಯುಕ್ತರು,
ದಾ–ಹ ನಗರಾಭಿವೃದ್ಧಿ ಪ್ರಾಧಿಕಾರ,
ದಾವಣಗೆರೆ.

ಪಿ.ಡಿ. 119